ಈಗ ಯಶಸ್ವಿಯಾಗಿ ಪ್ರದರ್ಶಿತವಾಗುತ್ತಲಿದೆ!




ಲಲಿತ, ಶಾಂತಕುಮಾರಿ, ಗಿರಿಜ, ಮುಕ್ಕಾಮಲ, ರೇಲಂಗಿ ಮುಂತಾದವರ ಅಭಿನಯ

: ಬೆಂಗಳೂರು :

ಜೈಹಿಂದ್ :: ನ್ಯೂ ಅಪೆರಾ

(ನೂತನ ಚಿತ್ರಮಂದಿರ) (ಸಿವಿಲ್ ಏರಿಯಾ)

ಮೈಸೂರು : ಚಾಮುಂಡೇಶ್ವರಿ ★ ಕೆ. ಜಿ. ಎಫ್ : ಕೃಷ್ಣಾ ★ ಮಂಗಳೂರು : ನ್ಯೂ ಚಿತ್ರ

A TALLAM RELEASE



## ಈ ಸಂಚಿಕೆಯಲ್ಲಿ



---

ಇವಲ್ಲದೆ ನಗೆಹನಿ, ಚಿತ್ರ, ಪದ್ಯಗಳೂ ಇವೆ.

ಮೇ ಬಿಡುಗಡೆ !






యువావారి

టింగ్ రంగా

డైరెక్టర్.... బి.ఎ. సుబ్బారావు

ప్రొడ్యూసర్... పి.ఎస్. శేషాచలం

స్టూడియో వాహిని




యువా పిక్చర్సు
20. కోట్సురోడ్. మద్రాసు.17



ಯುವ ಪಿಕ್ಚರ್ಸ್, 20 ಕೋಟ್ಸ್ ರೋಡ್, ಮದ್ರಾಸು - 17

# ಆರು ಭಾಷಗಳಲ್ಲಿ ಚಂದಮಾಮ

★

| | | |
|---|---|---|
| (ತೆಲುಗು) | .... | **ಚಂದಮಾಮ** |
| | ಬಿಡಿಸಂಚಿಕೆ | ವಾರ್ಷಿಕಚಂದಾ : 4-8-0 |
| | **0-6-0** | ಎರಡು ವರ್ಷಗಳಿಗೆ: 8-0-0 |
| (ಕನ್ನಡ) | .... | **ಚಂದಮಾಮ** |
| | ಬಿಡಿಸಂಚಿಕೆ | ವಾರ್ಷಿಕಚಂದಾ : 4-8-0 |
| | **0-6-0** | ಎರಡು ವರ್ಷಗಳಿಗೆ: 8-0-0 |
| (ಹಿಂದಿ) | .... | **ಚಂದಮಾಮ** |
| | ಬಿಡಿಸಂಚಿಕೆ | ವಾರ್ಷಿಕಚಂದಾ : 4-8-0 |
| | **0-6-0** | ಎರಡು ವರ್ಷಗಳಿಗೆ: 8-0-0 |
| (ತಮಿಳು) | .... | **ಅಂಬುಲಿಮಾಮ** |
| | ಬಿಡಿಸಂಚಿಕೆ | ವಾರ್ಷಿಕಚಂದಾ : 4-8-0 |
| | **0-6-0** | ಎರಡು ವರ್ಷಗಳಿಗೆ: 8-0-0 |
| (ಮಲೆಯಾಳ) | .... | **ಅಂಬಿಳಿ ಅಮ್ಮಾವನ್** |
| | ಬಿಡಿಸಂಚಿಕೆ | ವಾರ್ಷಿಕಚಂದಾ : 4-8-0 |
| | **0-6-0** | ಎರಡು ವರ್ಷಗಳಿಗೆ: 8-0-0 |
| (ಮರಾಠಿ) | .... | **ಚಾಂದೋಬಾ** |
| | ಬಿಡಿಸಂಚಿಕೆ | ವಾರ್ಷಿಕಚಂದಾ : 4-8-0 |
| | **0-6-0** | ಎರಡು ವರ್ಷಗಳಿಗೆ: 8-0-0 |

★

## ಚಂದಮಾಮ ಪಬ್ಲಿಕೇಷನ್ಸ್

2 & 3, ಆರ್ಕಾಟ್ ರೋಡ್, ಕೋಡಂಬಾಕಂ, ಮದ್ರಾಸ್ - 24



## ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು
ತಡೆದು ಆರೋಗ್ಯ ಕಾಪಾಡುವ ಅಮೃತಪಾನ.

ತಯಾರಕರು:

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್
ಟೆಸ್ಟಿಂಗ್ ಲ್ಯಾಬೋರಟರಿ, ಲಿ.,**

ಮಲ್ಲೇಶ್ವರಂ - ಬೆಂಗಳೂರು - 3

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ
ದೊರೆಯುತ್ತದೆ

ವ್ಯಾಪಾರದ ಗುರುತು 


# ಗ್ರೈಪ್ ಸಿರಪ್



ಶ್ರೇಷ್ಠತೆಯ ಗುರುತು.

## ಶಿಶು ಪೋಷಣೆಗೆ
## ಅತ್ಯುತ್ತಮವಾದ ಸಾಬೂನು

ಮತ್ತೊಂದು ಗೃಹಸಂಬಂಧ ಸಮಸ್ಯೆ! ತಾಯಿಯು ಮಕ್ಕಳ ಮೈ ತೊಳೆಯುವಾಗ ಮೈಸೂರು ಸ್ಯಾಂಡಲ್ ಸೋಪನ್ನು ಉಪಯೋಗಿಸುವಳು. ಆದರೆ ಪ್ರತಿಯೊಂದು ಶಿಶುವೂ ತನಗೇ ಪ್ರತ್ಯೇಕವಾಗಿ ಒಂದೊಂದು ಬಿಲ್ಲೆಯನ್ನು ಇಚ್ಛಿಸುತ್ತದೆ. ಮಕ್ಕಳು ಕೂಡ **ಮೈಸೂರು ಸ್ಯಾಂಡಲ್ ಸೋಪನ್ನು** ಅತಿ ಮೆಚ್ಚುತ್ತವೆ.







ಮೈಸೂರು

**ಸ್ಯಾಂಡಲ್ ಸೋಪು**

ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ

ಸಂಪುಟ ೮ : ಸಂಚಿಕೆ ೬

ಜೂನ್ ೧೯೫೨

## ಜಗಕೆ ಸೇವಸಲ್ಲಲಿ

ನೋಡು ಕಂದ! ನೋಡು ಕಂದ!
ಗಿಡದಲಿರುವ ಹೂವನು
ತನ್ನೊಳಿಹ ಸುಗಂಧವನ್ನು
ಬೀರುತಿರುವ ಪರಿಯನು.

ಎಷ್ಟು ಚೆಂದವದರ ಬಣ್ಣ!
ನಮ್ಮ ಕಣ್ಣ ಸೆಳೆವುದು.
ಅದರ ಸೊಬಗ ಸವಿಯನುಂಡು
ನಮ್ಮ ಮನವು ತಣಿವುದು.

ಆದರೇನು? ಸುಮದ ಬಾಳು
ಒಂದೆ ಚಣಕೆ ಮುಗಿವುದು
ಮುಗಿದರೇನು? ತಿರೆಗೆ ಅದರ
ಹಿರಿಯ ಸೇವೆ ಸಲುವುದು.

ಕಂದ ನಿನ್ನ ಬಾಳ್ವೆ ಇಂಥ
ಸುಮದ ಬಾಳ್ವೆಯಾಗಲಿ
ಚಣದಿ ಮುಗಿದರೇನು ಹಾನಿ?
ಜಗಕೆ ಸೇವೆ ಸಲ್ಲಲಿ.

—ಪ. ಸೀತಾರಾಮಭಟ್ಟ, ಮೂಡಬಿದ್ರಿ.









# ಮಾತು ಮೀರದ ಆನೆ

ಹಿಂದೊಮ್ಮೆ ಬಲು ದೊಡ್ಡ ಯುದ್ಧದಲ್ಲಿ
ಪಾಲುಗೊಂಡಿತ್ತು ಮುದಿಯಾನೆಯೊಂದು.
ಮಾವಟಿಗ ನೊಬ್ಬನೇ ಅದರಮೇಲಿದ್ದ
ಅರಸು ಬಾವುಟ ಹಿಂದೆ ನಿಲಿಸಿಕೊಂಡು.

ಕತ್ತಿಗಳು ಮಿಂಚಿದುವು ಥಳಥಳೆಂದು
ಹರಿಯಿತು ನೆತ್ತರ ಕಾಲುವೆಯೆ!
ಆವೇಶದ ಸಂಕುಲ ಸಮರದಲಿ
ರಣಕಣವೆಲ್ಲಾ ಹೆಣಮಯವೇ!

ರಾಜನ ಪಕ್ಷಕೆ ಸೋಲೆಂದೇ
ಎಲ್ಲರೂ ನಂಬುವ ತೆರನಾಯ್ತು.
ರಕ್ಷಕ ಸೈನ್ಯದ ಸತ್ತುಳಿದೆಲ್ಲರು
ಹಿಂಜರಿದೋಡುವ ಹಾಗಾಯ್ತು.

"ನಿಲ್ಲಿಲ್ಲೇ" ಎಂದರಚಲು ಮಾವುತ
ನಿಂತಿತಾನೆ ಆ ಸ್ಥಳದಲ್ಲೇ.
ಶತ್ರು ಸೈನ್ಯ ಉಕ್ಕೇರಿ ಕವಿದರೂ
ಆನೆ ಬೆಟ್ಟದಂ ತಿತ್ತಲ್ಲೇ!

ಹಗೆಯಂ ಬೊಂದು ಹಾರುತೆ ಬಂದು
ಮಾವುತನನು ಕೆಳ ಗುರುಳಿಸಿತು!
ಆದರು ಕದಲದೆ ನಿಂತಾನೆಯಮೇಲ್
ಬಾವುಟ ನೆಟ್ಟಗೆ ನಿಂತಿತ್ತು!

'ನವಗಿರಿನಂದ'

ಕುಣಿವ ನಿಶಾನೆಯ ಕಂಡು ಸೈನಿಕರು
ತಿರುಗಿದರೈ ಹೊಸ ಹುರುಪಿನಲಿ.
"ವಿಜಯ ಇಲ್ಲವೇ ವೀರಸ್ವರ್ಗವೆ"ಂದು
ಪಂಥ ತೊಟ್ಟು ಹೋರಾಡಿದರು.

ಕೊನೆಗೆ ಶತ್ರುಗಳು ಸೋತು ಓಡಿದರು
ಜಯವಾಯ್ತಾನೆಯ ಪಕ್ಷಕ್ಕೇ.
ವಿಜಯೋತ್ಸಾಹದಿ ಎಲ್ಲರು ಕುಣಿಯಲು
ಆನೆ ಕದಲದೇ ನಿಂತಿತ್ತು !

ಯಾರು ಕರೆದರೂ ಬಾರದಿರಲದು
ಮಾವುತನ ಮಗನ ಕರೆಸಿದರು.
ಅವನು ಬಂದು "ಬಾರೆ"ನ್ನಲು ಒಡನೆ
ನಡೆಯಿತು ಮೆಚ್ಚಲು ಕಂಡವರು.

ಅಯ್ಯೋ! ಆನೆಯ ಮೈಯೆಲ್ಲಾ
ಗಾಯವು ನೆತ್ತರ ಮಯವೆಲ್ಲಾ !
ನಡುಗಿ ಮಾವುತನ ಮಗನಡಿ ಬಿದ್ದು,
ಸತ್ತಿತು—ಕೀರ್ತಿಯ ಪಡೆಯಿತಲಾ !

ಎತ್ತಿದ ಬಾವುಟ ಬೀಳಿಸದಾನೆ!
ನಿಂತಕಾಲ ಹಿಂದಿಡದಾನೆ!
ಯುದ್ಧವ ಗೆಲಿಸಿದ ಬುದ್ಧಿಯಾನೆ ಅದು,
ಮಾವುತನಾ ನುಡಿಮೀರದ ಆನೆ.







# "ಗಡ್ಡದ ಗಿಡ್ಡ"



ಯು. ಲಕ್ಷ್ಮಣಕಾಮತ್.



ಸೋಮನ ಹಳ್ಳಿಯಲ್ಲಿ ಗಡ್ಡದ ಗಿಡ್ಡನನ್ನು ಅರಿಯದ ಜನರಿಲ್ಲ. ನಮ್ಮ ಗಡ್ಡದ ಗಿಡ್ಡನು ಬಳೆಮಾರಿ ತನ್ನ ಜೀವನವನ್ನು ಸಾಗಿಸುತ್ತಿದ್ದನು. ಅವನು ಬಹಳ ಗಿಡ್ಡನಾದ ಮನುಷ್ಯ. ಆದರೆ ಅವನ ಗಡ್ಡವು ಒಂದಡಿ ಉದ್ದ. ಇವನು ಪೇಟೆಗೆ ಬಂದರೆ ಜನರು ಇವನನ್ನು ನೋಡಿ ಗುಸುಗುಟ್ಟುತ್ತಿದ್ದರು. ಒಂದು ದಿದ ಗಿಡ್ಡನು ಒಂದು ಮಾತನ್ನು ಕೇಳಿದ. ಅದೇನೆಂದರೆ ಗಡ್ಡವು ಮುಖಕ್ಕಿಂತ ದೊಡ್ಡದಿದ್ದರೆ ಆ ಮನುಷ್ಯನು ಹೆಡ್ಡನೆಂದು.

ಹೀಗೆ ಮಾತಾಡಿದ್ದನ್ನು ಗಿಡ್ಡನು ಕೇಳಿ ಸುಮ್ಮನಿರದೆ ಕೂಡಲೆ ಮನೆಗೆ ಬಂದನು. ಗಡ್ಡವನ್ನು ಕತ್ತರಿಸಲು ಕತ್ತರಿ ಇರಲಿಲ್ಲ. ಆಗ ಅವನಿಗೆ ಬೇರೆ ಯಾವ ಉಪಾಯವೂ ತೋಚದೆ ಹೋಯಿತು. ಹೀಗೆ ಆಲೋಚಿಸುತ್ತಿರುವಾಗ ಅವನಿಗೆ ಬೆಂಕಿಪೆಟ್ಟಿಗೆಯೊಂದು ತೋರಿತು. ಕೂಡಲೆ ಬೆಂಕಿಪೆಟ್ಟಿಗೆಯಿಂದ ಕಡ್ಡಿ ತೆಗೆದು ಗೀರಿ, ಗಡ್ಡಕ್ಕೆ ಬೆಂಕಿ ಕೊಟ್ಟನು. ಮತ್ತು ಗಡ್ಡದ ಮಧ್ಯ ಕೈಯನ್ನು ಹಿಡಿದನು. ಹೀಗೆ ಗಡ್ಡವು ಉರಿಯುತ್ತಾ ಇರುವಾಗ ಬೆಂಕಿಯ ಶಾಖವನ್ನು ತಡೆಯಲಾರದೆ ಗಡ್ಡದಿಂದ ಕೈಯನ್ನು ತೆಗೆದನು. ಆಗ ಇಡೀ ಗಡ್ಡ ಸುಟ್ಟುಹೋಯಿತು. ಮುಖ ತುಂಬಾ ಬೆಂಕಿಯ ಬೊಕ್ಕೆಗಳು ಬಂದವು. ಈಗ ಗಡ್ಡದ ಗಿಡ್ಡನಿಗೆ ನಿಜವಾಗಿ ಅರಿವಾಯಿತು; ಏನೆಂದರೆ, ಜನರು ಆಡಿದ ಮಾತು ಸುಳ್ಳಲ್ಲ. ನಾನು ಈಗ ನಿಜವಾಗಿಯೂ ಹೆಡ್ಡನು ;—ಎಂದು.



# ಬಂಗಾರದ ಪಂಜರ

ಗುರುವಪ್ಪಶೆಟ್ಟಿ ಮುದುಕನಾದ. ಭಾರಿ ಭಾರಿ ವ್ಯಾಪಾರಮಾಡಿ ಲಕ್ಷಗಟ್ಟಲೆ ಧನ ಸಂಪಾದಿಸಿದ. ಆತನಿಗೆ ಇನ್ನು ವಿಶ್ರಾಂತಿ ಪಡೆಯುವುದು ಉತ್ತಮವೆಂದು ಅನ್ನಿಸಿತು.

ಕೃಷ್ಣಾನದಿ ತೀರದಲ್ಲಿ ವಿಶಾಲವಾದ ಭವನವನ್ನು ಕಟ್ಟಿಸಿದ. ಭವನದ ಸುತ್ತಲೂ ಸೊಗಸಾದ ತೋಟಮಾಡಿಸಿದ. ಅಲ್ಲಿ ಬೆಳೆದ ವಿವಿಧ ಫಲವೃಕ್ಷಗಳ ತೋಪುಗಳು ಆ ಪ್ರದೇಶವೆಲ್ಲವನ್ನೂ ನಂದನವನದಂತೆ ಕಾಣುವಹಾಗೆ ಮಾಡಿತ್ತು.

ಒಂದುದಿನ ಗುರುವಪ್ಪಶೆಟ್ಟಿ ಷಿಕಾರಿ ಹೊರಟ. ಚೆನ್ನಾಗಿ ಚಿಗುರಿದ್ದ ಮಾವಿನ ಮರದ ನೆರಳಿನಲ್ಲಿ, ತಾನು ಸದಾ ಕುಳಿತುಕೊಳ್ಳುವ ಜಗಲಿಯಮೇಲೆ ಕುಳಿತುಕೊಂಡ. ತಣ್ಣನೆಯ ಗಾಳಿ. ಆನಂದವನ್ನುಂಟುಮಾಡುವ ವಿವಿಧ ಪುಷ್ಪಗಳ ಕಂಪು, ಪಕ್ಷಿಗಳ ಕಲಕಲ ನಿನಾದ, ಎಲ್ಲವೂ ಆನಂದದಾಯಕವಾಗಿತ್ತು.

ಗುರುವಪ್ಪಶೆಟ್ಟಿ ಒಂದು ಮರಕ್ಕೆ ಆತು ಕುಳಿತುಕೊಂಡು ಸೊಂಪಾಗಿ ಚಿಗುರಿದ ಮಾವಿನ ಮರದಕೊಂಬೆಗಳನ್ನು ನೋಡುತ್ತಿದ್ದ. ಆತನು ನೋಡುತ್ತಿದ್ದ ರೆಂಬೆಯಮೇಲೆ ಆಗಲೇ ಒಂದು ಪಕ್ಷಿ ಬಂದು ಕುಳಿತದ್ದು ಆತನಿಗೆ ಕಾಣಿಸಿತು. ಆತ ಬೆರಗಾದ. ಯಾಕೆಂದರೆ ಅದು ಸಾಮಾನ್ಯವಾದ ಪಕ್ಷಿಯಲ್ಲ. ಇಂಧ್ರ ಧನಸ್ಸಿನಲ್ಲಿರುವಷ್ಟು ಬಣ್ಣಗಳು ಅದರ ಶರೀರದಮೇಲೆ ಒತ್ತಿದಂತೆ ಮೆರೆಯುತ್ತಿದೆ. ಕೊರಳಕೆಳಗೆ ಮಾತ್ರ ಮಿರಗುಟ್ಟುವ ಹೊಂಬಣ್ಣದ ಚುಕ್ಕೆಯಿತ್ತು.

ರೆಪ್ಪೆಬಡಿಯದೆ ಗುರುವಪ್ಪಶೆಟ್ಟಿ ಆ ಪಕ್ಷಿಯ ಕಡೆಗೇ ನೋಡುತ್ತಿದ್ದ. ಎರಡು ಮೂರು ನಿಮಿಷಗಳು ಕಳೆದತರುವಾಯ ಆ ಪಕ್ಷಿ ಮೃದುಮಧುರವಾಗಿ ಹಾಡಲು ಪ್ರಾರಂಭಿಸಿತು. ಕೋಗಿಲೆಯ ಕಂಠಸ್ವರ ಅದರ ಮುಂದೆ ನಿವಾಳಿಸಬೇಕು. ಆ ಕಂಠಸ್ವರವನ್ನು ಕೇಳಿದರೆ ಯಾವುದೋ ಕಿನ್ನರಿಯು ಪಕ್ಷಿಯ ರೂಪತಾಳಿ ಹಾಡುತ್ತಿರಬಹುದೆಂದು ಅನ್ನಿಸುತಿತ್ತು.

ಪಕ್ಷಿ ಹಾಡುವುದು ನಿಂತಿತು. ಗುರುವಪ್ಪ

ಟಿ. ಸಾವಿತ್ರಿ - ಮೈಸೂರು



ಶೆಟ್ಟಿ ಕಿವಿನಿಮಿರಿಸಿ, ಕಣ್ಣು ಅರಳಿಸಿ ನೋಡುತ್ತಿದ್ದಾನೆ. ಹಾಡು ನಿಲ್ಲುವುದೂ, ಆ ಪಕ್ಷಿಯ ಕಂಠದಿಂದ ಮಿರುಗುವ ಮಣಿಗಳಂತೆ ಯಾವುದೋ ಕೆಳಕ್ಕೆ ಉದುರುವುದೂ ಒಂದೇಸಾರಿ ನಡೆಯಿತು. ಆತ ಮತ್ತಷ್ಟು ಆಶ್ಚರ್ಯಗೊಂಡ. ಜಗಲಿಯಮೇಲಿಂದ ಎದ್ದು ಆ ಪಕ್ಷಿ ಕುಳಿತಿದ್ದ ರೆಂಬೆಯ ಹತ್ತಿರ ಹೋದ. ಅಲ್ಲಿ ಆ ಮರದ ಕೆಳಗೆ ಮಿರುಗುಟ್ಟುತ್ತಿರುವ ಬಂಗಾರದ ತುಣುಕುಗಳು ಆತನ ಕಣ್ಣಿಗೆ ಬಿದ್ದವು.

ಗುರುವಪ್ಪಶೆಟ್ಟಿ ಆನಂದಕ್ಕೆ ಎಣೆಯೇ ಇಲ್ಲ. ಅಪರಿಮಿತವಾದ ಆನಂದ ದಿಂದ, ಆ ಬಂಗಾರವನ್ನು ಕೈಯಲ್ಲಿ ತೆಗೆದುಕೊಂಡು ಪರೀಕ್ಷಿಸಿ, ಗುಟ್ಟಾಗಿ ಕಿಸೆಗೆ ಸೇರಿಸಿದ. ತಲೆಯೆತ್ತಿ ಮತ್ತೆ ಕೊಂಬೆಯಕಡೆ ನೋಡಿದ. ಆದರೆ ಬಂಗಾರದ ಪಕ್ಷಿ ಹಾರಿ ಹೋಗಿತ್ತು.

ಮೂರನೇಯದಿನ ಅದೇಸಮಯಕ್ಕೆ ಅಲ್ಲಿಗೆ ಬಂದ. ಆದರೆ ಬಂಗಾರದ ಪಕ್ಷಿ ಬರಲಿಲ್ಲ. ಹೀಗೇ ಹತ್ತುದಿನ ಕಳೆದತರುವಾಯ, ಹಠಾತ್ತನೆ ಆ ಪಕ್ಷಿ ಒಂದು ದಿನ ಬೆಳಗ್ಗೆ ಹಿಂದೆ ಬಂದಿದ್ದ ಸಮಯಕ್ಕೆ ಬಂದು ಕುಳಿತುಕೊಂಡಿತು. ಹಾಡು ಹಾಡಿತು. ಗುರುವಪ್ಪ ಶೆಟ್ಟಿ ತನ್ಮಯನಾಗಿ ಕೇಳಿದ. ಆ ತರುವಾಯ ಬಂಗಾರದ ತುಣುಕುಗಳನ್ನು ಆರಿಸಿ ಹಿಂದಿನಂತೆಯೇ ಜೋಪಾನಮಾಡಿದ.

ದಿನಗಳು, ವಾರಗಳು ಕಳೆದವು. ಆದರೂ ಆ ಪಕ್ಷಿಯ ಸುಳಿವೇಇಲ್ಲ. ಗುರುವಪ್ಪ ಶೆಟ್ಟಿಗೆ ಗಾಭರಿ, ಕಳವಳ ಉಂಟಾಯಿತು. ಆ ಬಂಗಾರದಪಕ್ಷಿಯ ಕಂಠಂದಿಂದ ಹೊರ ಬೀಳುವ ಬಂಗಾರಕ್ಕಿಂತಲೂ, ಅದು ಹಾಡುವ ಹಾಡಿನಮೇಲೆ ಆತನಿಗೆ ಮಮಕಾರ ಹೆಚ್ಚಾಯಿತು.

ತನ್ನ ಭವನದಲ್ಲಿ ಕೆಲಸಮಾಡುವ ನೌಕರರಿಗೆ ಮಾತ್ರವಲ್ಲದೆ, ಸುತ್ತಿಮುತ್ತಲಿರುವ ಹಳ್ಳಿಗರಿಗೂಸಹಾ ಆ ಪಕ್ಷಿಯನ್ನು ಹಿಡಿದು ಕೊಟ್ಟರೆ ಸಾವಿರರೂಪಾಯಿ ಬಹುಮಾನ ಕೊಡುವೆನೆಂದು ವಾಗ್ದಾನಮಾಡಿದ.

ಸಾವಿರ ರೂಪಾಯಿಗಳೆಂದರೆ ಯಾರಿಗೆ ತಾನೇ ಆಶೆಯಾಗುವುದಿಲ್ಲ? ಆ ವಿಷಯ

ಕೇಳಿದವರೆಲ್ಲಾ ಅದೇ ಕೆಲಸವಾಗಿ ಆ ಪಕ್ಷಿಗೋಸ್ಕರ ನಾನಾಅವಸ್ಥೆಗಳನ್ನು ಬೀಳುತ್ತಿದ್ದರು. ಆ ತೋಟದಲ್ಲಿ ಮಾತ್ರವಲ್ಲ, ಸುತ್ತಮುತ್ತಲಿರುವ ಅಡವಿಗಳನ್ನೂ ಸಹ ಶೋಧಿಸಿದರು. ಅದು ಅವರ ಕೈಗೆ ಸಿಕ್ಕುವುದು ಇರಲಿ, ಅವರ ಕಣ್ಣಿಗೆಸಹಾ ಕಾಣಿಸಲಿಲ್ಲ.

ಮಾನವನಿಗೆ ಕೆಲಸದಲ್ಲಿ ಛಲವಿದ್ದ ಪಕ್ಷಕ್ಕೆ ಎಂದಿಗಾದರೂ ಅದನ್ನು ಸಾಧಿಸಬಲ್ಲನು. ಅದರೊಂದಿಗೆ ಆತನಿಗೆ ತಿಳುವಳಿಕೆ, ಯುಕ್ತಿ, ಸಾಮರ್ಥ್ಯಗಳಿದ್ದರೆ ಹೇಳಬೇಕಾಗಿಯೇ ಇಲ್ಲ.



ಗುರುವಪ್ಪಶೆಟ್ಟಿ ಹತ್ತಿರವಿದ್ದ ಮಾಲಿ ಛಲವಾದಿ, ಬುದ್ಧಿವಂತ. ಒಂದು ದಿನ ಬಲೆಬೀಸಿ ಆ ಬಂಗಾರ ಪಕ್ಷಿಯನ್ನು ಹಿಡಿದೇ ಬಿಟ್ಟ.

ತನ್ನ ತೋಟದ ಮಾಲಿ ತಂದ ಪಕ್ಷಿಯನ್ನು ಕಂಡಕೂಡಲೇ ಶೆಟ್ಟಿಗೆ ಆದ ಆನಂದ ಅಷ್ಟಿಷ್ಟಲ್ಲ. ಚಿನ್ನದ ಪಂಜರದಲ್ಲಿ ಆ ಬಂಗಾರದ ಪಕ್ಷಿಯನ್ನಿಟ್ಟು, ಅದನ್ನು ಹಿಂದೆ ಯಾವ ಮರದಮೇಲೆ ಅದು ಕುಳಿತುಕೊಂಡು ಹಾಡಿತ್ತೋ ಆ ಮರದ ಕೊಂಬೆಗೇನೇತು ಹಾಕಿಸಿದ.

ಮಾರನೇದಿನ ತನ್ನ ಪ್ರಾಣಮಿತ್ರರಾದ ಮೂವರು ದೊಡ್ಡಮನುಷ್ಯರನ್ನು ಆಹ್ವಾನಿಸಿದ. ಆ ಬಂಗಾರದಪಕ್ಷಿಯ ಗಾನಕೇಳಿ, ಕೊರಳಿನಿಂದ ಉದುರುವ ಬಂಗಾರದ ತುಣುಕುಗಳನ್ನು ನೋಡುವುದು ಅದೃಷ್ಟವೆಂದು ಅವರು ಭಾವಿಸಿದರು.

ಆ ಪಕ್ಷಿ ಯಾವಗ ಹಾಡುವುದೋ ಎಂದು, ಆ ಪಕ್ಷಿಯು ಕಂಠದಿಂದ ಹೊರಬೀಳುವ ಅಪೂರ್ವ ಗಾನಕ್ಕಾಗಿ ಅವರು ಸೂರ್ಯೋದಯದಿಂದ ಸೂರ್ಯಾಸ್ತಮಯದ ವರೆವಿಗೂ ಕುಳಿತಿದ್ದರು. ಆ ಪಕ್ಷಿ ಹಾಡದಿದ್ದರೆ ಹೋಗಲಿ, ರೆಪ್ಪೆಯಾದರೂ ಬಡೆಯಲಿಲ್ಲ.

ಈ ಅಸಂದರ್ಭ ಶೆಟ್ಟಿಗೆ ಅರ್ಥವಾಗಲಿಲ್ಲ. ಪಂಜರದಲ್ಲಿರುವುದು ಹೊಸತಾದುದರಿಂದ ಬಹುಶಃ ಭಯಪಟ್ಟಿರಬಹುದೆಂದು ಹೇಳಿ ಆ ಮೂವರ ಕ್ಷಮಾಪಣೆ ಕೇಳಿಕೊಂಡ. ಬಂಗಾರದ ಪಂಜರದಲ್ಲಿದ್ದು, ಬೇಕಾದ ಫಲಗಳೂ, ತಂಪಾಗಿರುವ ನೀರೂ ತಡಕಾಡದೆ

ಸುನಾಯಾಸವಾಗಿ ಸಿಗುವ ಸೌಕರ್ಯಕ್ಕಿಂತ ಯಾವ ಪಕ್ಷಿಗಾದರೂ ಬೇಕಾದುದೇನಿದೆ? "ನಾಳೆ ಬೆಳಗ್ಗೆ ನೀವು ಆ ಮಂಜುಳಗಾನ ಕೇಳಬಹುದು" ಎಂದ.

ಮಾರನೇಯ ದಿನ ಸೂರ್ಯೋದಯಕ್ಕೆ ಸರಿಯಾಗಿ ಮೂವರು ಸ್ನೇಹಿತರನ್ನೂ ಕರೆದು ಕೊಂಡು ಗುರುವಪ್ಪಶೆಟ್ಟಿ ಆ ಪಕ್ಷಿಯಿದ್ದ ಸ್ಥಳಕ್ಕೆ ಹೋದ. ಆದಿನ ಸಹ ಮಧ್ಯಾಹ್ನದವರೆವಿಗೂ ಆ ನಾಲ್ವರೂ ಕಾತುರದಿಂದ ಕಾದುಕೊಂಡು ಕುಳಿತಿದ್ದರು. ಆದರೆ ಪಕ್ಷಿ ಹಾಡಲಿಲ್ಲ.

ಗುರುವಪ್ಪಶೆಟ್ಟಿಗೆ ಬೇಸರ ಮತ್ತು ಕೋಪ ಸಹ ಬಂತು. ಸ್ನೆಹಿತರಲ್ಲಿ ಒಬ್ಬಾತನು ಸಂಕೋಚದಿಂದ "ಪಾಪ, ಆ ಪಕ್ಷಿಗೆ ಏನು ಕಷ್ಟವಾಗಿದೆಯೋ? ಅದು ಅಸಲು ಜೀವಿಸಿರುವುದೋ?" ಎಂದ.

ಗುರುವಪ್ಪಶೆಟ್ಟಿಯ ಕೋಪ ನೆತ್ತಿಗೇರಿತು. "ಬಂಗಾರದ ಪಂಜರದಲ್ಲಿಟ್ಟಿದ್ದೇನೆ. ಅದಕ್ಕೆ ನೇರಾದ ಸೌಕರ್ಯಗಳನ್ನು ಮಾಡಿಸಿದ್ದೇನೆ. ಹಾಗಿರುವಾಗ ಅದು ಮರಣಿಸುವುದೆಂದರೇನು? ಯಾವ ಪಕ್ಷಿಗಾದರು—ಅದು ಬಂಗಾರದಪಕ್ಷಿಯೇ ಆಗಿರಲಿ — ಅದಕ್ಕಿಂತಲೂ ಬೇಕಾದುದೇನು?" ಎಂದುಕೊಂಡ.

ನೌಕರನನ್ನು ಕೂಗಿ, ಆ ಪಂಜರವನ್ನು ಕೆಳಗೆ ಇಳಿಸುವಂತೆ ಹೇಳಿದ. ಅವನೂ ಮರ ಹತ್ತಿ ಪಂಜರವನ್ನು ತಂದು ಹೆದರಿಕೆಯಿಂದ ಯಜಮಾನನ ಮುಂದಿಟ್ಟ.

ಆತುರದಿಂದ ಶೆಟ್ಟಿ, ಆತನ ಸ್ನೇಹಿತರು ಪಂಜರದಸುತ್ತೂ ಸೇರಿದರು. ನೋಡಿದರು. ಕಣ್ಣು ಕಣ್ಣು ಬಿಟ್ಟರು. ಒಬ್ಬರಮುಖ ಒಬ್ಬರು ನೋಡಿದರು. "ಅರೆ" ಎಂಬ ಶಬ್ದ ಹೊರತು ಅವರ ಬಾಯಿಂದ ಯಾವ ಮಾತೂ ಹೊರಡದಾಯಿತು.

ಅನುಮಾನ ತೀರದೆ ಶೆಟ್ಟಿ ಪಂಜರದ ಬಾಗಿಲು ತೆಗೆದು ಆ ಬಂಗಾರದ ಪಕ್ಷಿಯನ್ನು ಮುಟ್ಟಿ ನೋಡಿದ. ಆತನ ಶರೀರ ಕಂಪಿಸಿತು. ಪಾಪ! ಆ ಪಕ್ಷಿ ಸತ್ತು ಆದಾಗಲೇ ಎರಡು ದಿನಗಳಾಗಿತ್ತು!





## 5

ಬಾಕುಮೇಲಿದ್ದ ಹೆಸರನ್ನು ನೋಡಿದಾಗಲಿಂದ ಶಕ್ತಿಸಿಂಹ ವಿಕಲಗೊಂಡನು. ಮೂರ್ಛೆಯಿಂದ ಆತನು ಚೇತರಿಸಿಕೊಂಡ. ಕೂಡಲೇ ಎಲ್ಲರನ್ನೂ ಹೊರಗೆ ಹೋಗುವಂತೆ ಹೇಳಿದ. ಬಾಕು ಹೊರಗೆ ತೆಗೆದ. ತಿರುಗಿಸಿ ನೋಡಿದ. ಆ ಹಿಡಿಯಕಡೆ, ಹಿಡಿಯಮೇಲಿನ ಹೆಸರಿನ ಕಡೆ ಮತ್ತೆ ಮತ್ತೆ ನೋಡಲು ಪ್ರಾರಂಭಿಸಿದ. ಹಾಗೇ ನೋಡುತ್ತಿರುವಂತೆಯೇ ಆತನ ವೈಖರಿ ಅನೇಕರೀತಿ ಬದಲಾಯಿಸುತ್ತಿತ್ತು.

"ಎಲೋ ಧೂರ್ತ, ನನ್ನ ಪ್ರಾಣಕ್ಕೆ ಕೈ ಹಾಕಿದೆಯಲ್ಲಾ? ಎಂತಹ ವ್ಯೂಹ ಹೂಡಿದೆ. ಎಷ್ಟು ಚಾತುರ್ಯದಿಂದ ಕಪಟ ನಾಟಕ ಆಡಿದೆ. ಅವರವರಿಗೆ ತಕ್ಕಂತೆ ಮಾತಾಡಿ, ಎಷ್ಟು ಚತುರತೆಯಿಂದ ನಂಬಿಕೆ ಹುಟ್ಟಿಸಿದೆ. ಆದರೆ ನಿನ್ನ ಪಾಪ ನಿನ್ನನ್ನು ಹೊರಗೆಳೆಯಿತು. ನಿನ್ನ ಕುಟಿಲತೆಯನ್ನು ಹೊರಗೆಡವಿತು ಈ ಬಾಕು." ಎಂದು ತನ್ನಲ್ಲಿ ತಾನೇ ಮಾತನಾಡಿಕೊಳ್ಳಲು ಪ್ರಾರಂಭಿಸಿದ.

ಆತನಿಗೆ ಮನಸ್ಥಿಮಿತ ಕುದುರಲಿಲ್ಲ. ಆಲೋಚನೆಗೆ ಅಂತ್ಯವಿಲ್ಲ. ಗಬಕ್ಕನೆ ಎದ್ದ. ಅತ್ತಿಂದ ಇತ್ತ, ಇತ್ತಿಂದ ಅತ್ತ ನಡೆಯಲಾರಂಭಿಸಿದ. "ಎಲ್ಲಾ ನನ್ನದೇ ತಪ್ಪು. ಏಕೆಂದರೆ ನನ್ನ ಕುಟುಂಬದಲ್ಲಿ ಕಷ್ಟಗಳು ಪ್ರಾರಂಭವಾದಾಗಲಿಂದ ಹಿಂದೂ ಮುಂದೂ ಆಲೋಚನೆ ಇಲ್ಲದೆ ನಾನು ಎಲ್ಲ ಸಾಧುಗಳನ್ನೂ ನಂಬಿದೆ. ಅವರಮುಂದೆ ನನ್ನ ವಿಷಯವೆಲ್ಲವನ್ನೂ ಹೇಳಿಕೊಳ್ಳುತ್ತಾ ಬಂದೆ. ಇದೇ ನನ್ನ ಮನೆ ಮುಳುಗಿಸಿತು. ಈ ದೌರ್ಬಲ್ಯ ಕಂಡುಕೊಂಡು ಇವನು ಇಂತಹ ಪಾಪಕ್ಕೆ ಕೈಹಾಕಿದ. ಅವನಿಗೆ ನಾನೆಂದರೆ ಸಿಂಹಸ್ವಪ್ನವಲ್ಲಾ! ನನ್ನ ವಿಷಯದಲ್ಲೇ ಈ ರೀತಿ ಸಂಚುಮಾಡುವ ಸಾಹಸ ಮಾಡಿದ




ನಲ್ಲಾ ?" ಎಂದು ಮತ್ತೆ ತೀವ್ರಾಲೋಚನೆ ಯಲ್ಲಿ ಬಿದ್ದ.

ಅಂದಿನ ಘಟನೆಗಳು ಜ್ಞಾಪಕಕ್ಕೆ ಬಂತೆಂದರೆ ಸರಿ, ಹೆದರಿಕೆ ಆತನಿಗೆ. "ನನ್ನ ಬುದ್ಧಿ ಎಲ್ಲಿ ಹಾಳಾಯಿತು. ಅವನು ಮಿಕ್ಕೆಲ್ಲ ಸಾಧುಗಳಂತೆ ಕಾಣಿಸದಿರುವಾಗಲಾದರೂ ತಿಳಿದುಕೊಳ್ಳಲಾರದೆ ಹೋದೆ. ಅಯ್ಯೋ, ಅವನನ್ನು ದೇವರಂತೆ ನಂಬಿ. ನನ್ನ ಹೃದಯವನ್ನೇ ಅರ್ಪಿಸಿದೆನೆಲ್ಲಾ" ಎಂದು ಜಿಜ್ಞಾಸೆಗೊಳಗಾದ.

ಆ ಕೂಡಲೇ ಮತ್ತೆ ಧೈರ್ಯ ತಂದುಕೊಂಡು "ದೇವರು ನನ್ನ ಕೈ ಬಿಡಲಿಲ್ಲ. ಇದಕ್ಕಿಂತಲೂ ಮತ್ತೆ ಯಾವ ದೃಷ್ಟಾಂತ ಬೇಕು. ಅವನಿಗೆ ಈ ದುರ್ಬುದ್ಧಿ ಹುಟ್ಟಿದುದು ಒಂದುರೀತಿ ಒಳ್ಳೆಯದೇ ಆಯಿತು. ಪ್ರಾಣ ಉಳಿದರೆ ಸಾಕೆಂದು ಅವನು ಓಡಿದ. ಮತ್ತೆ ಈ ಜನ್ಮದಲ್ಲಿ ಮುಖತೋರಿಸುವುದು ಮಿಥ್ಯ. ಆದ್ದರಿಂದ ನನ್ನ ಯುಕ್ತಿ ಸಲೀಸಾಗಿ ನಡೆಯಲು ಒಳ್ಳೇ ಅವಕಾಶ ಬದಗಿತು." ಎಂದು ಯೋಚಿಸಿ, ಯಾವುದೋ ಒಂದು ಭಾರಿ ಸಮಸ್ಯೆ ಬಗೆಹರಿದಂತೆ ಸಂತೋಷಗೊಂಡ.

ಮಾರನೇಯದಿನವೇ ಶಕ್ತಿಸಿಂಹ ಒಂದು ಸಭೆ ಏರ್ಪಡಿಸಿ, ಊರಿನ ಪ್ರಮುಖರನ್ನೆಲ್ಲಾ ಬರಮಾಡಿಕೊಂಡ. "ಒಂದುಸಾರಿ ನಾವು ಹಿಂದೆ ಸಂಭವಿಸಿದ ಘಟನೆಗಳನ್ನು ಜ್ಞಪ್ತಿಗೆ ತಂದುಕೊಳ್ಳೋಣ. ಇದಕ್ಕಂತಲೇ ನಿಮಗೆಲ್ಲಾ ತೊಂದರೆಕೊಟ್ಟು ಬರಮಾಡಿಕೊಂಡೆ. ಅಕ್ಕ, ಭಾವ, ಮಗು ತೀರಿಕೊಂಡಿದ್ದು ಕೇವಲ ವಿಧಿ ವೈಚಿತ್ರ್ಯವೆಂದು ಭಾವಿಸಿದ್ದೆವು. ಒಂದುವೇಳೆ ನಡುವೆ ಬಂದ ಆ ವೃದ್ಧಳೇ ಕಾರಣವಿರಬಹುದೇನೋ ಎಂದು ಸಂಶಯಪಟ್ಟೆವು. ಕಡೆಗೆ ಏನೂ ಮಾಡಲಾರದೆ, ಪ್ರಪಂಚದ ಬಾಯಿ ಮುಚ್ಚಿಸಲೋಸುಗ ಪಾಪ, ಮಹಾನುಭಾವನಾದ ಈ ಆಸ್ಥಾನ ವೈದ್ಯನಮೇಲೂ, ಲೋಕಜ್ಞಾನವಿಲ್ಲದ ದಾದಿಯಮೇಲೂ ಆರೋಪಣೆ ಮಾಡಿ, ಬಂಧಿಸಿ, ಪಾಪವನ್ನು ಮೂಟೆಕಟ್ಟಿಕೊಂಡೆವು. ಆದರೀಗ ನಿಜ ಬಯಲಾಯಿತು. ವಂಶ ಪಾರಂಪರ್ಯವಾಗಿ ನಮ್ಮ ರಾಜವಂಶವನ್ನು ನೋಡಿಕೊಳ್ಳುತ್ತಿದ್ದವನೂ, ನಂಬಿದ



ಭಂಟನಂತೆ ನಡೆದುಕೊಳ್ಳುತ್ತಿದ್ದವನೂ ಆದ ಒಂದುವ್ಯಕ್ತಿ ಈ ಅಚಾತುರ್ಯಕ್ಕೆ ಕೈಕಾಕಿದ" ಎಂದು ಹೇಳಲು ಸಭೆಯಲ್ಲಿ ಉದ್ರೇಕವುಂಟಾಯಿತು.

"ಯಾರು ಆ ದುರುಳ? ಯಾರು ಉಂಡ ಮನೆಗೆ ಎರಡು ಬಗೆದ ನೀಚ?" ಎಂದು ಕಿರಿಚಿದರು.

"ನಾನು ಪೂರ್ತಿಹೇಳಲು ಅವಕಾಶಕೊಡಿ. ಎಲ್ಲಾ ಕೇಳಿದತರುವಾಯ ನಿಮಗೇ ತಿಳಿಯುವುದು" ಎಂದು ಮಂತ್ರಿ ತನ್ನನ್ನು ಕೊಲ್ಲಲು ಬಂದನೆಂದು ಪ್ರಜೆಗಳು ನಂಬುವರೀತಿಯಲ್ಲಿ ಮಾಯಾಸಾಧುವಿನ ವಿಷಯವೆಲ್ಲಾ ಹೇಳಿದ.

"ಆ ನೀಚನ ಹೆಸರುಹೇಳಿ. ಅವನನ್ನು ಸೀಳಿ, ಚೆಂಡಾಡಿದ ಹೊರತು ಮನೆಗೆ ಹೋಗುವುದಿಲ್ಲ ಎಂದು ಹೇಳುತ್ತ ಎಲ್ಲರೂ ಶಕ್ತಿಸಿಂಹನನ್ನು ಸುತ್ತುಗೂಡಿದರು. ಆಗ ಶಕ್ತಿಸಿಂಹ ತನ್ನ ಹತ್ತಿರವಿದ್ದ ಚಾಕುಹೊರತೆಗೆದು ಅಲ್ಲಿದ್ದ ಹಿರಿಯರಕೈಗೆ ಕೊಟ್ಟ. ಅದರ ಮೇಲಿದ್ದ ಹೆಸರನ್ನು ಕಂಡು ಅವರು ಚಕಿತರಾದರು. "ಎಲ ಎಲಾ ಇದೇನು? ಮಂತ್ರಿಗೇ ಈ ದುರ್ಬುದ್ಧಿ ಹುಟ್ಟಿತೇ? ದ್ರೋಹಿ, ಸ್ವಾಮಿದ್ರೋಹಿ" ಎಂದು ಜನ ರೊಚ್ಚಿಗೆದ್ದರು. "ಅವನನ್ನು ಹಡಿದು ಚೂರು ಚೂರು ಮಾಡಬೇಕು" ಎಂದು ಕೆಲವರು ಉಗ್ರ ಶಪಥಮಾಡಿದರು. "ಸದ್ಯ ನಮ್ಮ ಪ್ರಭುಗಳು ಅದೃಷ್ಟವಂತರು" ಎಂದು ಮತ್ತೆ ಕೆಲವರು ಸಮಾಧಾನಹೊಂದಿದರು. ಕೆಲವರು ಮಂತ್ರಿಯನ್ನು ಹಿಡಿದುತರಲು ತಕ್ಷಣವೇ ಹೊರಟರು.

"ಸರಿ ಅವರು ಹೋಗಲಿಬಿಡಿ. ಅವರಷ್ಟೇ ಅಲ್ಲ. ನಾವೆಲ್ಲರೂ ಹೋಗಬೇಕಾಗಿ ಬರಬಹುದು. ರಾಜದ್ರೋಹಿ ಉಳಿದಿರಲು ನಮಗೆ ನಿದ್ದೆ ಹೇಗೆಬರುತ್ತದೆ? ಶತ್ರುಶೇಷವಿರಕೂಡದೆಂದು ಹೇಳುತ್ತಾರೆ ಹಿರಿಯರು. ಆದ್ದರಿಂದ ನಮ್ಮ ಬದ್ಧವೈರಿಯನ್ನು ಹಿಡಿದು ಚಿತ್ರವಧೆ ಮಾಡಿದಹೊರತು ಅನ್ಯಕಾರ್ಯಕ್ಕೆ ಕೈಹಚ್ಚಗೂಡದು" ಎಂದು ಉದ್ರೇಕಪೂರಿತವಾಗಿ ನುಡಿದ ಶಕ್ತಿಸಿಂಹ. "ಅಷ್ಟೇ ಅಲ್ಲ, ಇನ್ನು ಮುಂದೆ ನಮ್ಮ ರಾಜ್ಯಕ್ಕೆ ಹೊಸಬರು ಯಾರು ಬಂದರೂ ಕಟ್ಟುನಿಟ್ಟಾಗಿ ಪರೀಕ್ಷಿಸ



ಬೇಕು. ಪರೀಕ್ಷೆಗೆ ನಿಂತಹೊರತು ಒಳಗೆ ಬಿಡಕೂಡದು" ಎಂದು ಶಾಸನಹೊರಡಿಸಿದ. ಮಂತ್ರಿಯನ್ನು ಹಿಡಿದುತಂದವರಿಗೆ ಭಾರಿ ಬಹುಮಾನಗಳನ್ನು ಕೊಡುವುದಾಗಿ ರಾಜ್ಯದಲ್ಲಿ ಡಂಗುರ ಹೊಡೆಯಿಸಿದ.

"ಈಗ ಮತ್ತೊಂದು ಮುಖ್ಯವಿಷಯ ಹೇಳಿ ಇಂದಿನ ಸಬೆ ಮುಕ್ತಾಯಮಾಡೋಣ. ಈ ಆಸ್ಥಾನವೈದ್ಯರು ನಮ್ಮೆಲ್ಲರಿಗೂ ತಂದೆಯಂತಹವರು. ಗುರುಪ್ರಾಯರು, ಅನುಭವಜ್ಞರು. ಅಷ್ಟೇ ಅಲ್ಲದೆ ಸ್ವಾಮಿಭಕ್ತಿ ಪಾರಾಯಣರು. ಇಂಥ ಮಹಾನುಭಾವನನ್ನು ಅವಮಾನ ಮಾಡಿ ಬಂಧಿಸಿದ ಆ ಪರಮ ನೀಚ. ಅವನ ಮಾತನ್ನು ತೆಗೆದು ಹಾಕಲು ನನಗೆ ಆಗ ಶಕ್ತಿ ಇರಲಲ್ಲ. ನಿರಪರಾಧಿಗಳಿಗೆ ಅಪಚಾರವಾಗುತ್ತಿದ್ದರೂ ನೋಡುತ್ತಾ ಸುಮ್ಮನಿರಬೇಕಾಗಿ ಬಂತು. ಆದರೆ ಈಗಲಾದರೂ ನಮ್ಮ ತಪ್ಪನ್ನು ಗ್ರಹಿಸಿದೆವಲ್ಲ ಎಂದು ಸಂತೋಷ ಪಡಬೆಕು. ತಪ್ಪು ತಿದ್ದಿಕೊಳ್ಳಲು ನನಗೆತೋರಿದ ಒಂದು ಸಾಧನ ನಿಮಲ್ಲಿ ಬಿನ್ನವಿಸಿಕೊಳ್ಳುವೆನು" ಎಂದು ಶಕ್ತಿಸಿಂಹನು ಒಂದುನಿಮಿಷ ಸುಮ್ಮನಿದ್ದು, ಆಸ್ಥಾನವೈದ್ಯನ ಎರಡು ಕೈಗಳನ್ನೂ ಹಿಡಿದು ಕರೆದುಕೊಂಡು ಹೋಗಿ ತನ್ನ ಅಸ್ಥಾನದಲ್ಲಿ ಕೂರಿಸಿದನು. ಸಬೆಯಕಡೆ ತಿರುಗಿ "ನಿಮ್ಮ ಅನುಮತಿಯ ಮೇರೆಗೆ ಈ ಕ್ಷಣದಿಂದ ಈತನನ್ನು ನಮ್ಮ ರಾಜ್ಯಕ್ಕೆ ಸಾರಥಿಯನ್ನಾಗಿ ಮಾಡುತ್ತಿರುವೆನು. ಪರೋಕ್ಷವಾಗಿದ್ದರೂ ನಾನು ನಿಮ್ಮ ಸೇವೆ ಮಾಡುತ್ತಲೇ ಇರುತ್ತೇನೆ." ಎಂದು ಹೇಳಲು, ನೆರೆದಿದ್ದವರೆಲ್ಲಾ ಆತನ ತ್ಯಾಗಕ್ಕೂ, ಔದಾರ್ಯಕ್ಕೂ ಮೆಚ್ಚಿಕೊಂಡರು.

ಆದರೆ ಆಸ್ಥಾನವೈದ್ಯ ಸಂದಿಗ್ಧದಲ್ಲಿ ಸಿಲುಕಿದ. ಮಂತ್ರಿಯನ್ನು ಆತ ಚಿಕ್ಕಂದಿನಿಂದಬಲ್ಲ. ಆತನು ರಾಜಕುಟುಂಬಕ್ಕೆ ದ್ರೋಹ ಮಾಡುವನೆಂಬ ಮಾತು ನಂಬಲರ್ಹವಲ್ಲ. ಯಾವ ಪರಿಸ್ಥಿತಿಯಲ್ಲಿ ಆತನು ಈ ರೀತಿ ವರ್ತಿಸಿದನೊ, ಸಂಗತಿ ಸಂದರ್ಭಗಳನ್ನು ತಿಳಿಯದೆ ಏನೂ ಹೇಳುವಂತಿಲ್ಲ. ಯಾವುದು ಹೇಗಿದ್ದರೂ ಆತನಿಗೆ ಮಂತ್ರಿಯ ಮೇಲಿನ ನಂಬಿಕೆ, ಅಭಿಮಾನ ತುಸವಾದರೂ

ಕಡಿಮೆಯಾಗಲಿಲ್ಲ. ನಿಜಾನಿಜಗಳು ಬಯಲಾಗಬೇಕಾದರೆ ಮಂತ್ರಿ ಮತ್ತೆ ಬರುವುದು ಅವಶ್ಯಕ. ಮಂತ್ರಿಯನ್ನು ಹೇಗಾದರೂ ಮತ್ತೆ ಬರಮಾಡಬೇಕೆಂದು ಈ ಏರ್ಪಾಟು ಮಾಡಿದ್ದಾನೆ ಶಕ್ತಿಸಿಂಹ. ಈರೀತಿ ಇರುವಾಗ ತನಗೆ ಕೊಟ್ಟ ಗೌರವವನ್ನು ಯಾಕೆ ಉಳಿಸಿಕೊಳ್ಳ ಬಾರದು? ಚೆನ್ನಾಗಿ ಆಲೋಚಿಸಿ, ಮರುಮಾತನ್ನಾಡನೆ ವೈದ್ಯನು ಸಿಂಹಾಸನ ವೇರಿದ್ದು ಎಲ್ಲರಿಗೂ ಸಂತೋಷವನ್ನುಂಟು ಮಾಡಿತು.

* * *



ಅಂದು ಓಡಿಹೋದ ಮಂತ್ರಿ ಏನು ಸಾಮಾನ್ಯನೇ? ಅಷ್ಟಿಷ್ಟಕ್ಕೆ ಸಿಕ್ಕಿಬೀಳುವ ತಿಳಿಗೇಡಿಯೇ? ಆತನು ಎಲ್ಲ ಸಂದಿಗ್ಧಗಳಿಗೆ ಸಂಸಿದ್ಧನಾಗಿಯೇ ಬಂದಿದ್ದರೂಸಹ ಈರೀತಿ ಸಂಭವಿಸುವುದೆಂದು ಕನಸಿನಲ್ಲೂ ನೆನೆಸಿರಲಿಲ್ಲ. ಆತನು ಕುಶಾಗ್ರಬುದ್ಧಿ. ತಾನು ಸಿಕ್ಕಿಬೀಳುವ ಪರಿಸ್ಥಿತಿ ಒದಗಿತು. ಬದುಕಿದ್ದರೆ ಎಷ್ಟಾದರೂ ಕಷ್ಟಪಟ್ಟು ತನ್ನ ಕಾರ್ಯವನ್ನು ಸಾಧಿಸುವ ಅವಕಾಶವಿರುತ್ತದೆ. ಈಗ ಸಿಕ್ಕಿಬಿದ್ದರೆ ಮುಂದೇನು ತಾನೇ ಮಾಡಬಲ್ಲ? ಶಕ್ತಿಸಿಂಹನ ಕುಟಿಲತೆಯನ್ನೂ, ತನ್ನ ನಿಷ್ಕಾಪಟ್ಯವನ್ನೂ ಪ್ರಪಂಚಕ್ಕೆ ತಿಳಸಬೇಕು. ಆದ್ದರಿಂದ ಬಾಕು ಜಾರಿಬಿದ್ದಕೊಡಲೇ ಹಿಂದಿರುಗಿಸಹ ನೋಡದೆ, ಮಿಂಚುಹೊಳೆದಂತೆ ಮಾಯವಾದ.

ಶರವೇಗ, ವಾಯುವೇಗ, ಮನೋವೇಗಗಳಿಂದ ಯಾರಕಣ್ಣಿಗೂ ಬೀಳದೆ ದಟ್ಟವಾದ ಅಡವಿಗಳಲ್ಲಿ ಹಾದುಹೋದ. ಶಕ್ತಿಸಿಂಹನ ಆಶ್ವಿಕರು ಆತನನ್ನು ಹಿಡಿಯಲು ಮಾಡುವಂತಹ ಎಲ್ಲಪ್ರಯತ್ನಗಳನ್ನು ಮಾಡಿ, ಬೇಸರಹೊಂದಿ, ನಿಸ್ತೇಜವಾಗಿ ಹಿಂದಿರುಗಿದರು.

ಬಹಳ ಕಷ್ಟಪಟ್ಟು ರಾತ್ರಿ ಹಗಲು ಒಂದೇ ಸವನೆ ಎರಡುದಿನ ಪ್ರಯಾಣಮಾಡಲು, ಮಂತ್ರಿಗೆ ತುಸದೂರದಲ್ಲಿ ಒಂದು ಪರ್ವತ ಶ್ರೇಣಿ ಕಾಣಿಸಿತು. ಅದನ್ನು ಸೇರಲು ಕಾತುರಗೊಂಡ. ಆದರೆ ಆಯಾಸಗೊಂಡುಸೋತು ಹೋಗಿದ್ದ ನಾದುದರಿಂದ ದಾರಿಯಲ್ಲಿ ಕುದುರೆಯಮೇಲಿಂದ ಬಿದ್ದುಬಿಟ್ಟ.

ಹಾಗೆಬಿದ್ದ ಮಂತ್ರಿಗೆ ಆ ನಿರ್ಜನಪ್ರದೇಶ



ದಲ್ಲಿ ದಿಕ್ಕುಯಾರು ಇದ್ದಾರೆ? ಸ್ವಲ್ಪಹೊತ್ತಿಗೆ ತನ್ನಷ್ಟಕ್ಕೆ ತಾನೆ ತಿಳುವಳಿಕೆಬಂತು. ಬಳಲಿಕೆ ಪರಿಹಾರ ಮಾಡಿಕೊಳ್ಳೋಣವೆಂದಿರುವಷ್ಟ ರಲ್ಲಿ, ಆತನಿಗೆ ಒಂದು ವಿಚಿತ್ರವಾದ ಧ್ವನಿ ಕೇಳಿಸಿತು. ಕಿವಿಯಗಲಿಸಿ ಆ ಧ್ವನಿ ಬಂದ ಕಡೆ ನೋಡಿದ. ಅದೊಂದು ದೊನ್ನೆಯಂ ತಿರುವ ವಿಚಿತ್ರವಾದ ಆಕಾರ. ಆಕಾಶದಲ್ಲಿ ಹಾರಿ ಹೋಗುತ್ತಿದ್ದ ಆ ಆಕಾರ ತುಸಹೊತ್ತಿ ಗೆಲ್ಲಾ ಕಾಣಿಸದಾಯಿತು.

ಏನಿದು ವಿಚಿತ್ರ. ಆ ದೊನ್ನೆ ಏಕೆ ಹಾರು ತ್ತಿದೆ? ಎಲ್ಲಿಗೆ ಹೋಯಿತು? — ಎಂದು ಮಂತ್ರಿಯ ತಲೆಯಲ್ಲಿ ನಾನಾಪ್ರಶ್ನೆಗಳು ಉದ್ಭವಿಸಿದವು. ಅನೇಕ ಕಷ್ಟಗಳನ್ನು ಸಹಿಸಿ, ಐದುದಿನಗಳಾದಮೇಲೆ ಆ ಪರ್ವತಶ್ರೇಣಿಯ ಆಚೆಕಡೆಭಾಗವನ್ನು ಸೇರಿದ.

ಅದೆಲ್ಲಾ ಮತ್ತೊಂದು ಪ್ರಪಂಚದಂತೆ ಕಾಣಿಸಿತು ಆತನಿಗೆ. ಹಿಂದೆ ಕಾಣಿಸಿದ ದೊನ್ನೆಯಾಕಾರ ಮತ್ತೆ ಯಾವಾಗ ಕಾಣ ಬರುವುದೋ, ಅದರಿಂದ ಹೊರಬಿದ್ದ ಮಧುರ ಧ್ವನಿ ಮತ್ತೆ ಯಾವಾಗ ಕೇಳಿಬರುವುದೋ ಎಂದು ಆತುರದಿಂದ ಎದುರು ನೋಡುತ್ತಿದ್ದ ಮಂತ್ರಿಗೆ ಅದು ಕಾಣಿಸದಿದ್ದರೂ, ಅದನ್ನು ವಿಚಾರಿಸಿದ ಮತ್ತೊಂದು ವಿಚಿತ್ರ ಆತನದೃಷ್ಟಿ ಯನ್ನು ಆಕರ್ಷಿಸಿತು.

ಕಣ್ಣಿಗೆಕಾಣುವಷ್ಟುದೂರದಲ್ಲಿ ಆಕಾಶ ವನ್ನೂ ಭೂಮಂಡಲವನ್ನೂ ಸೇರಿಸುವ ಒಂದು ರಾಟಣ ಕಾಣಿಸಿತು. ನಮ್ಮ ಹಿರಿ ಯರು ಭೂಮಿಯಿಂದ ಸ್ವರ್ಗಕ್ಕೆ ಹಾದಿ ಬಂದಿದೆ ಎಂದು ಕತೆ ಹೇಳುತ್ತಿರುತ್ತಾರೆ. ಅದೇ ಏನು ಇದು? ಆದರೆ ಈ ರಾಟಣ ಸಣ್ಣಗಿರುವುದಲ್ಲಾ? ಇದಕ್ಕೆ ಮೆಟ್ಟಿಲು ಎಲ್ಲಿದೆ? ಎಂದುಕೊಳ್ಳುತ್ತಾ ಕುದುರೆ ಹತ್ತಿದ. ಅರ್ಧದಾರಿ ಬರುವಷ್ಟರಲ್ಲಿ ಎರಡುದಿನ ಹಿಡಿ ಯಿತು. ಆಗ ಆ ರಾಟಣ ಮತ್ತಷ್ಟುದಪ್ಪಕ್ಕೆ ಸ್ಪಷ್ಟವಾಗಿ ಕಾಣಿಸಿ ಅದೊಂದು ಸ್ತಂಭವಾ ಗಿರಬಹುದೆಂದು ತೋರಿತು.

ಮತ್ತೆರಡು ದಿನ ಶ್ರಮವಹಿಸಿ ಅದರ ಹತ್ತಿರ ಸೇರಿಕೊಂಡ. ಪರಿಶೀಲಿಸಿ ನೋಡಲು ಅದು ರಾಟಣವೂ ಅಲ್ಲ, ಸ್ತಂಭವೂ ಅಲ್ಲ. ಒಂದು ಅಪೂರ್ವವಾದ ಸೌಧ.

ಆ ಅದ್ಭುತಭವನವನ್ನು ನೋಡಿದ ಕೂಡಲೇ " ಇದನ್ನು ಮಾನವರು ನಿರ್ಮಿಸಲು

ಸಾಧ್ಯವೇ?" ಎಂದು ಇನ್ನಷ್ಟು ಆಶ್ಚರ್ಯ ಗೊಂಡ. ಅದು ದೀಪಸ್ತಂಭದಂತೆ ಉದ್ದಕ್ಕೆ, ಗುಂಡಗೆ ಆಕಾಶವನ್ನು ತಾಕುತಿತ್ತು. ಮೇಲೆ ಮೇಲಕ್ಕೆ ಹೋಗುತ್ತಾ ವಿಶಾಲವಾಗಿದೆ. ಅದರ ತುತ್ತತುದಿಯಲ್ಲಿ ಒಂದು ವಿಚಿತ್ರವಾದ ಗೋಪುರವಿದೆ. ಅದು ಅದರ ಅಂದವನ್ನು ಇಮ್ಮಡಿಸುತಿತ್ತು. ಭವನಕ್ಕೆ ಉಪಯೋಗಿಸಿದ ಪ್ರತಿ ಇಟ್ಟಿಗೆಗೂ ಬಂಗಾರದ ಮುಲಾಮು ಮಾಡಿದಂತೆ ಥಳಥಳನೆಂದು ಕಣ್ಣು ಕೋರೈಸುತಿತ್ತು. ಆ ಭವನದ ಅಂದಚೆಂದಗನ್ನು ನೋಡುತ್ತಾ ಬೆರಗಾಗಿ ನಿಂತಿರಲು ಕೆಳಗೆ ಒಂದು ಕಡೆ ಚದುರವಾಗಿರುವ ಬಿರುಕು ಕಾಣಿಸಿತು.

ಅಲ್ಲಿಗೆ ಹೋಗಿ ಆ ಭಾಗವನ್ನು ಕದಲಿಸಿ ನೋಡಿದ. ಅದೊಂದು ಕೀಲು ಕದ. ಆತನು ಕದಲಿಸಿದಕೂಡಲೇ ಒಳಗೆ ಹೋಗಲು ದಾರಿ ಕೊಟ್ಟಿತು. ಆತನು ಒಳಗೆ ಹೋದಕೂಡಲೇ ಮತ್ತೆ ಎಂದಿನಂತೆ ಮುಚ್ಚಿಕೊಂಡಿತು. ನಾಲ್ಕು ಹೆಜ್ಜೆ ಇಟ್ಟನೋ ಇಲ್ಲವೋ ಒಬ್ಬ ಮನುಷ್ಯನು ಹಿಡಿಸುವಷ್ಟು ಒಂದು ಬೋನಿನಂತಹ ಪೆಟ್ಟಿಗೆ ಕಾಣಿಸಿತು. ಅದಕ್ಕೆ ಒಂದೆಡೆ ದ್ವಾರ ವಿದೆ. ಅದರಲ್ಲಿ ಆತನು ಅಡಿಯಿಟ್ಟ ಕೂಡಲೇ ಅದು ರೊಯ್ಯನೆ ಆತನನ್ನು ಮೇಲಕ್ಕೆ ತೆಗೆದುಕೊಂಡು ಹೋಗಿ ನಿಂತು ಬಿಟ್ಟಿತು. ಪ್ರಭಾವವುಳ್ಳ ಈ ಕೌತುಕಕ್ಕೆ ಬೆರಗಾಗಿ, ಮಂತ್ರಿ ಆ ಬೋನಿನಿಂದ ಹೊರ ಬಿದ್ದು ಹಾಗೇ ಮುಂದಕ್ಕೆ ನಡೆದ.



ಅವು ವಿಶಾಲವಾದ ಕೋಣೆಗಳು. ಒಂದು ಕೋಣೆಯಲ್ಲಿ ಚಿಕ್ಕಂದಿನಲ್ಲಿ ರಾಜಕುಮಾರರು ಆಟವಾಡಲು ಬೇಕಾದ ವಿವಿಧ ಬಣ್ಣದ ಆಟದ ಸಾಮಾನುಗಳಿದ್ದವು. ಒಂದು ಕೋಣೆಯಲ್ಲಿ ಗಾಜಿನ ಬೀರುಗಳು. ಅವುಗಳ ತುಂಬಾ ರಾಜಕುಮಾರರು ಧರಿಸುವ ಉಡುಪುಗಳು ಇವೆ. ಇನ್ನೊಂದು ಕೋಣೆಯಲ್ಲಿ ಬೊಂಬೆ ಪುಸ್ತಕಗಳು. ಆ ಪುಸ್ತಕಗಳ ಹಾಳೆಗಳನ್ನು ತಿರುವಿನೋಡಿದರೆ ಪ್ರಪಂಚದಲ್ಲಿ ನಡೆಯುವ ವಿಷಯಗಳಷ್ಟೇ ಅಲ್ಲದೆ, ದೇವಲೋಕ, ನಾಗ ಲೋಕಗಳಲ್ಲಿ ನಡೆಯುವ ವಿಷಯಗಳನ್ನೂ ತಿಳಿಯಬಹುದು.

ಇಂತಹ ವಿಚಿತ್ರವಾದ ಕೋಣೆಗಳನ್ನು ನೋಡಿಯಾದಮೇಲೆ, ಕಡೆಯಲ್ಲಿ ಆತನು ಒಂದು ದೊಡ್ಡ ದ್ವಾರವನ್ನು ಸೇರಿಕೊಂಡ.

ಅದನ್ನು ತೆಗೆಯಲು ನಂದನ ವನದಂತಹ ಪೂತೋಟಕ್ಕೆ ದಾರಿತೆಗೆಯಿತು. ಆ ಪುಷ್ಪಗಳ ಸೌಂದರ್ಯ, ಸೌರಭ ಆತನನ್ನು ಪರವಶನನ್ನಾಗಿ ಮಾಡಿತು. ತುಸಹೊತ್ತು ಪರಿಮಳವನ್ನು ಆಘ್ರಾಣಿಸಿ, ಮುಂದಕ್ಕೆ ಹೆಜ್ಜೆಯಿಟ್ಟ. ಅಲ್ಲಿ ಹೋದರೆ ಮತ್ತೊಂದು ದ್ವಾರ ಸಿಕ್ಕಿತು. ಅದು ಅಪರೂಪವಾದ ಫಲಜಾತಿಗಳಿಂದ ಕೂಡಿರುವ ಮತ್ತೊಂದು ತೋಟಕ್ಕೆ ದಾರಿ ತೋರಿತು. ಮಂತ್ರಿಯ ಆಶ್ಚರ್ಯಕ್ಕೆ ಮಿತಿಯಿಲ್ಲ. ತನಗೆ ಬೇಕಾದಷ್ಟು ಹಣ್ಣುಗಳನ್ನು ತಿಂದು ಕ್ಷುದ್ಬಾಧೆಯನ್ನು ತೀರಿಸಿಕೊಂಡ. ಕಂಡುಕೇಳದಿದ್ದ ಫಲಗಳನ್ನು ಸವಿನೋಡುತ್ತಾ ಮುಂದಕ್ಕೆ ಸಾಗಲು ಆತನಿಗೆ ಮತ್ತೊಂದು ದ್ವಾರ ಕಾಣಿಸಿತು. ಅದನ್ನು ತೆಗೆದು ನೋಡಲು ರಾಜಕುಟುಂಬದವರು ಜಲಕವಾಡುವ ಕೊಳ ನಿರ್ಮಲವಾದ ನೀರಿನಿಂದ ತುಂಬಿ ಕಣ್ಣಿಗೆ ಹಬ್ಬವನ್ನುಂಟುಮಾಡುತಿತ್ತು. ಕೊಳದ ಪಕ್ಕದಲ್ಲೇ ಒಂದು ತೊಟ್ಟಿಯನ್ನು ಕಟ್ಟಿಸಲಾಗಿತ್ತು. ಅದರಲ್ಲಿ ಸಿಹಿನೀರಿದೆ. ಸ್ನಾನಮಾಡಲು ಈ ರೀತಿ ಸಿದ್ಧವಾಗಿದ್ದ ಸಲಕರಣೆಗಳನ್ನೂ, ಪದ್ಧತಿಯನ್ನೂ, ಸೌಕರ್ಯಗಳನ್ನೂ ಆತನೆಂದೂ ನೋಡಿರಲಿಲ್ಲ. ಇಷ್ಟು ಪ್ರದೇಶವನ್ನು ಸುತ್ತು ಹಾಕಿದರೂ ಒಬ್ಬರಾದರೂ ಬಂದು ಆತನನ್ನು ಪ್ರಶ್ನೆಮಾಡಲಿಲ್ಲ. ಅದರಿಂದ ಧೈರ್ಯವಹಿಸಿ ಕೊಳದಲ್ಲಿ ಸ್ನಾನ ಮಾಡಿದ.

ಆ ತರುವಾಯ ಇನ್ನಷ್ಟು ದೂರ ಹೋಗಲು ಒಂದು ದೊಡ್ಡ ಪಡಸಾಲೆಸಿಕ್ಕಿತು. ನೆಲವನ್ನೆಲ್ಲಾ ಹಾಲ್ಗಲ್ಲುಗಳಿಂದ ಹಾಸಲಾಗಿತ್ತು. ಕನ್ನಡಿಯಂತೆ ನಮ್ಮ ಪ್ರತಿಬಿಂಬ ಕಾಣಿಸುವುದು. ಅಲ್ಲಿ ಮೆತ್ತನೆಯ ದಿಂಬುಗಳಿಂದ ಅಣಿಮಾಡಲ್ಪಟ್ಟಿದ್ದ ಕುರ್ಚಿಯ ಮೇಲೆ ಕುಳಿತುಕೊಂಡ. ಆಗ ಆತನಿಗೆ ವಿವಿಧ ಆಲೋಚನೆಗಳು ಜನಿಸಿದವು: "ಹಿಂದೆ ತಾನು ಕೇಳಿದ್ದ ಮಧುರಧ್ವನಿ ಏನು? ದೊನ್ನೆಯಾಕಾರವೇನು? ವಿಚಿತ್ರವಾದ ಈ ಭವನವೇನು? ರಾಜಯೋಗ್ಯವಾದ ಈ ಸೌಕರ್ಯಗಳೆಲ್ಲಾ ಏನು? ಇಂತಹ ವಿಶಾಲ ಭವನದಲ್ಲಿ ಒಂದು ಹುಳವಾದರೂ ಸಂಚರಿಸುತ್ತಿಲ್ಲವಲ್ಲಾ, ಏಕೆ" ಎಂದು ಯೋಚನೆಗೊಳಗಾದ ಅವನಿಗೆ ಏನೂ ತೋರಲಿಲ್ಲ.

—(ಮುಂದುವರಿಯುತ್ತೆ)







# ಬಡವರ ಬಂಧು

ಸುಲೇಮಾ಼ ಒಬ್ಬ ಗಣ್ಯ ಮುಸಲ್ಮಾನ ಚಕ್ರವರ್ತಿ. ಆತನ ಮಂತ್ರಿ ಜಾಫರ್. ಜಾಫರ್ ಬುದ್ಧಿವಂತ, ಯೋಗ್ಯ. ಆತನು ಬಡವರ ಬಂಧು. ಅವರಿಗೆ ಯಾವುದಾದರೂ ಕಷ್ಟ ಬದಗಿದರೆ ಸಹಿಸಲಾರ. ಧನವಂತರ ಮೇಲೆ ತೆರಿಗೆ ವಿಧಿಸಿ, ಹಣ ವಸೂಲುಮಾಡಿ, ಆ ಹಣವನ್ನೆಲ್ಲಾ ಬಡವರಿಗಾಗಿ ವಿನಿಯೋಗಿಸುತ್ತಿದ್ದ. ರಾಜ್ಯದಲ್ಲಿದ್ದ ದೀನದಲಿತರಿಗೆಲ್ಲಾ ಸಹಾಯಮಾಡುತ್ತಿದ್ದುದರಿಂದ ಜಾಫರಿಗೆ 'ದೀನಬಂಧು' ಎಂಬ ಬಿರುದು ಬಂತು.

ಬಡವರಿಗೆ ಜಾಫರೆಂದರೆ ತುಂಬಾ ಪ್ರೀತಿ; ಗೌರವ. ಧನವಂತರಿಗೆ ಆತನೆಂದರೆ ದ್ವೇಷ; ಅಲಕ್ಷ್ಯ. ಜಾಫರನಿಂದಾಗಿ ಜಮೀನ್ದಾರರಿಗೆ ಇನ್ನೂ ಹೆಚ್ಚುಹೆಚ್ಚಾಗಿ ಭೂಮಿ ಕಾಣಿಗಳನ್ನು ಸಂಪಾದಿಸಲು ಅವಕಾಶವಿಲ್ಲವಾಯಿತು. ವರ್ತಕರು ಹೆಚ್ಚು ಲಾಭಪಡೆಯಲು ಸಾಧ್ಯವಿಲ್ಲವಾಯಿತು. ಧನಿಕರು ಸಂಪಾದಿಸಿದ ಹಣದ ಬಹುಭಾಗ ತೆರಿಗೆಯ ರೂಪದಲ್ಲಿ ಚಕ್ರವರ್ತಿಯ ಬೊಕ್ಕಸವನ್ನು ಸೇರುತಿತ್ತು. ಅಕ್ರಮವಾಗಿ ಸಂಪಾದಿಸುವವರನ್ನು ಜಾಫರ್ ಕಂಡುಹಿಡಿದು ಶಿಕ್ಷಿಸುತ್ತಿದ್ದ. ಉದ್ಯೋಗಿಗಳಿಗೆಲ್ಲಾ ಆತನೆಂದರೆ ಹೆದರಿಕೆ, ನಡುಕ. ಲಂಚಗೂಳಿಗಳನ್ನೂ, ಅಧಿಕಾರ ದುರ್ವಿನಿಯೋಗಮಾಡುವವರನ್ನೂ ಹಿಡಿದು, ತುಸವಾದರೂ ದಯ, ದಾಕ್ಷಿಣ್ಯಗಳಿಲ್ಲದೆ ಅವರನ್ನು ದಂಡೆನೆಗೆ ಗುರಿಮಾಡುತ್ತಿದ್ದ.

ಜಾಫರನ ಕೈಯಿಂದ ಹೇಗಾದರೂ ಮಾಡಿ ತಪ್ಪಿಸಿಕೊಳ್ಳಬೇಕೆಂದು ಸಿರಿವಂತರೆಲ್ಲರೂ ಸೇರಿ, ಆತನಮೇಲೆ ಒಂದು ಸಂಚು ಹೂಡಿದರು. ಜಾಫರ್ ಇಲ್ಲದಸಮಯ ನೋಡಿ ಚಕ್ರವರ್ತಿಯ ಹತ್ತಿರ ಹೋಗಿ ಚಾಡಿ ಹೇಳುವರು. ಚಾಡಿಕೋರರ ಮಾತು ಕೇಳಿ ಚಕ್ರವರ್ತಿಗೆ ಕ್ರಮೇಣ ಮಂತ್ರಿಯಮೇಲೆ ಅನುಮಾನ ಪ್ರಬಲವಾಯಿತು.

ಒಂದು ದಿನ ಜಾಫರನ ಶತ್ರುಗಳು ಚಕ್ರವರ್ತಿಯೊಂದಿಗೆ "ಪ್ರಭೂ, ನಮ್ಮ ಮಂತ್ರಿವರ್ಯರು ತೆರಿಗೆಯ ರೂಪದಲ್ಲಿ ಕೋಟ್ಯಾಂತರ ರೂಪಾಯಿಗಳನ್ನು ವಸೂಲು

ಪಿ. ವಿ. ರಾಮಚಂದ್ರಮೂರ್ತಿ - ಮದರಾಸು.



ಕಡುಕೋಪ ವುಂಟಾಯಿತು ಚಕ್ರವರ್ತಿಗೆ. ಮರು ಆಲೋಚನೆ ಯಿಲ್ಲದೆ "ಜಾಫರನನ್ನು ಗಲ್ಲಿಗೆ ಹಾಕಿ. ಅವನ ಮುಖ ನನಗೆ ಕಾಣ ಸಲೇಕೂಡದು. ಬೇರೆ ಯಾರೂ ಇಂತಹ ರಾಜದ್ರೋಹಕಾರ್ಯಕ್ಕೆ ಕೈ ಹಾಕದಿರಲು ಹೆದರಿಕೆ ಹುಟ್ಟುವಂತೆ ಮಾಡಬೇಕು. ಆದುದರಿಂದ ಜಾಫರನ ಶವವನ್ನು ಹೂಳದೆ, ನಾಲ್ಕು ರಸ್ತೆಗಳು ಸೇರುವಕಡೆ ಬಿಸಾಡಿ, ಭಟರನ್ನು ಕಾವಲಿಡಿ. ರಾಜದ್ರೋಹಿಗಳ ಶವಗಳನ್ನು ಕಾಗೆಗಳೂ, ಹದ್ದುಗಳೂ ಚುಚ್ಚಿ ಚುಚ್ಚಿ ತಿನ್ನುವಂತೆ ಮಾಡಬೇಕು. ಅವುಗಳ ಸಮಾಧಿಸಹ ಆಗಬಾರದು." ಎಂದು ಕಟ್ಟಾಜ್ಞೆ ಮಾಡಿದ.

ಮಾಡಿದರು. ಆ ಹಣವೆಲ್ಲಾ ಪ್ರಭುಗಳ ಖಜಾನೆ ಸೇರಿದೆಯೋ ಇಲ್ಲ ಮಂತ್ರಿವರ್ಯರ ಸ್ವಂತ ಬೊಕ್ಕಸಕ್ಕೆ ಹೋಗುತ್ತಿರುವುದೋ ಮಹಾಸ್ವಾಮಿಯವರು ವಿಚಾರಿಸಿರುವಿರೇನು?" ಎಂದರು.

ಕೂಡಲೇ ಚಕ್ರವರ್ತಿ ಖಜಾನೆಗೆ ಹೋಗಿ ನೋಡಿದರು. ಅದರಲ್ಲಿ ಶ್ರೀಮಂತರು ಹೇಳಿದಷ್ಟು ಹಣವಿರಲಿಲ್ಲ. ಅಷ್ಟು ಇರುವುದಾದರೂ ಹೇಗೆ? ಆಗ ಬಂದ ಹಣವನ್ನು ಆಗಲೇ ಬಡವರಿಗಾಗಿ ಖರ್ಚುಮಾಡುತ್ತಾ ಬಂದಿದ್ದಾನೆ ಮಂತ್ರಿ. ಎಂದಾದರೂ ರಾಜನು ಲೆಕ್ಕಪತ್ರಗಳನ್ನು ನೋಡಿದ್ದರೆ ಆತನಿಗೆ ಎಲ್ಲವೂ ವಿಶದವಾಗಿ ತಿಳಿಯುತಿತ್ತು.

ತನ್ನ ಹಣವನ್ನೆಲ್ಲಾ ಅಪಹರಿಸಿದನೆಂದು

ಜಾಫರನಮೇಲಿನ ಸೇಡು ತೀರಿಸಿಕೊಳ್ಳಲು ಕಾತುರರಾಗಿದ್ದ ದುರ್ಮಾರ್ಗರು ಕೂಡಲೇ ಓಡಿ ಹೋಗಿ ಯಾವಪಾಪವನ್ನೂ ಅರಿಯದೆ ನಿಶ್ಚಿಂತೆಯಿಂದ ನಿದ್ದೆಮಾಡುತ್ತಿದ್ದ ಜಾಫರನನ್ನು ಬಂಧಿಸಿ, ಚಕ್ರವರ್ತಿಯ ಆಜ್ಞೆಯನ್ನು ಅಕ್ಷರಶಃ ಪಾಲಿಸಿ, ಜಾಫರನ ಶವವನ್ನು ನಾಲ್ಕು ರಸ್ತೆಗಳುಕೂಡವಕಡೆ ಬಿಸಾಡಿದರು.

ರಾಜಾಜ್ಞೆ ಯಾದುದರಿಂದ ಜಾಫರನ ಬಂಧುಮಿತ್ರರಿಗೂ ಸಹ ಶವದಹತ್ತಿರ ಹೋಗಲು ಅವಕಾಶವಾಗಲಿಲ್ಲ. ಆಲಿ ಎಂಬ ಬಡವನೊಬ್ಬನು ಆ ದಾರಿಯಲ್ಲಿ ಹೋಗುತ್ತಾ

ಈ ಶವವನ್ನು ನೋಡಿ ಜಾಫರನದೆಂದು ಗುರುತುಹಿಡಿದ. ಆಶ್ಚರ್ಯದಿಂದ, ದುಃಖ ವನ್ನು ತಡೆಯಲಾರದೆ "ಇದೇನು, ಈ ಮಹಾನುಭಾವನೆಂದರೇನು? ಈತನಿಗೆ ಇಂತಹ ಗತಿ ಒದಗುವುದೆಂದರೇನು" ಎಂದು ಆ ಶವದ ಮೇಲೆಬಿದ್ದು ದುಃಖಿಸಲಾರಭಿಂಸಿದ.

ರಾಜಭಟರು ಆ ಬಡವನಿಗೆ ವಿಷಯುವ ನ್ನೆಲ್ಲಾ ವಿವರವಾಗಿ ಹೇಳಿ, "ಕೂಡಲೇ ನೀ ನಿಲ್ಲಿಂದ ಹೊರಟು ಹೋಗದಿದ್ದರೆ ನಿನ್ನಗತಿ ನೆಟ್ಟಗಾಗಲಿಕ್ಕಿಲ್ಲ. ಆದುದರಿಂದ ನಿನ್ನದಾರಿ ನೀನುಹಿಡಿ" ಎಂದು ಬೆದರಿಸಿದರು.



ಆಗ ಆಲಿ ಅಂದ: "ಈ ರಾಜ್ಯದಲ್ಲಿ ಬಡ ವರಪಾಲಿಗೆ ಕಲ್ಪವೃಕ್ಷದಂತಿದ್ದ ಪುಣ್ಯಾತ್ಮ ಜಾಫರ್. ಈತನಿಗೆ ಅಕಸ್ಮಾತ್ತಾಗಿ ಈ ದುರ ವಸ್ಥೆ ಸಂಭವಿಸುವುದಂದರೇನು. ಇದು ಜಾಫ ರನ ಸಾವಲ್ಲ. ಬಡವರೆಲ್ಲರೂ ಸತ್ತಂತೆಯೇ ಸರಿ. ವಿಷಯು ಇಷ್ಟುದೂರಬಂದಮೇಲೆ ಯಾರಭಯವೇನು? ಈ ಮಹಾತ್ಮನ ಪವಿತ್ರ ದೇಹವನ್ನು ತೆಗೆದುಕೊಂಡುಹೋಗಿ ಸಮಾಧಿ ಮಾಡಿ ಬರುವೆನು. ಆತರುವಾಯು ನಿಮ್ಮಿಷ್ಟ ಬಂದಂತೆ ಮಾಡಿಕೊಳ್ಳಿ" ಎಂದು ಭಕ್ತಿಪರ ವಶತೆಯಿಂದ ಜಾಫರನ ಶವವನ್ನು ಭುಜದ ಮೇಲೆ ಹಾಕಿಕೊಂಡು ಹೊರಟ.

ಕಾವಲಿದ್ದ ಭಟರು ಅಡ್ಡಿಬಂದು ಶವವನ್ನು ತೆಗೆದುಕೊಂಡು ಹೋಗಲು ಬಿಡಲಿಲ್ಲ. ಅವರು ಆಲಿಯನ್ನು ಎಳೆದುಕೊಂಡು ಹೋಗಿ ಚಕ್ರ ವರ್ತಿಯುಮುಂದೆ ನಿಲ್ಲಿಸಿ, ನಡೆದ ವಿಷಯ ವನ್ನು ತಿಳಿಸಿದರು.

ಚಕ್ರವರ್ತಿಯ ಕೋಪಕ್ಕೆ ಮೇರೆ ಇಲ್ಲ. ಆತನು ಕಣ್ಣುಗಳಲ್ಲಿ ಕಿಡಿಕಾರುತ್ತಾ "ಮೂರ್ಖನೇ, ನನ್ನ ಆಜ್ಞೆಯನ್ನು ತಿರಸ್ಕ ರಿಸುವೆಯಾ? ನಿನಗಷ್ಟು ಧೈರ್ಯವೇ?" ಎಂದು ಗದರಿಸಿದ.

ತುಸವಾದರೂ ಅಂಜದೆ ಆಲಿ "ಪ್ರಭು ವರ್ಯ ಜಾಫರನು ಬಡವರ ಕಲ್ಪದ್ರುಮ. ನಿಮ್ಮ ಖಜಾನೆಯು ಹಣದಲ್ಲಿ ಒಂದು ಕಾಸನ್ನಾದರೂ ತನ್ನ ಸ್ವಂತಕ್ಕಾಗಿ ವಿನಿಯೋಗಿಸಿದವನಲ್ಲ ಆತ. ನನ್ನಂತಹ ದರಿದ್ರರನ್ನು ಆತನು ಯಾವರೀತಿ ಕಾಪಾಡಿ

ದನೋ ವಿಚಾರಿಸಿ ನೋಡಿದರೆ ನಿಮಗೇ ತಿಳಿಯುತ್ತದೆ. ಈ ಮಹಾತ್ಮನನ್ನು ಸಾಯಿಸುವುದೆಂದರೇನು? ಅಷ್ಟಕ್ಕೆ ನಿಲ್ಲಿಸದೆ ಆತನ ಶವಕ್ಕೆ ಅವಮಾನಮಾಡುವುದು ನ್ಯಾಯವೆ?"

ಆಲಿಯ ಬಾಯಿಂದ ಈ ಮಾತುಗಳು ಹೊರಬಿದ್ದಕೂಡಲೇ "ನಾನು ನಿರ್ದೋಷಿಯನ್ನು ಸಾಯಿಸಲಿಲ್ಲವಷ್ಟೇ?" ಎಂಬ ಕಳವಳ ಚಕ್ರವರ್ತಿಯ ಹೃದಯದಲ್ಲುಂಟಾಯಿತು.

ಸನಿಯದಲ್ಲಿದ್ದ ಜಾಫರನ ಮಿತ್ರನು "ಲೆಕ್ಕಪತ್ರಗಳನ್ನು ನೋಡಿದರೆ, ಮಂತ್ರಿಯ ವಿಷಯದಲ್ಲಿ ಈತ ಹೇಳಿದಮಾತು ಸತ್ಯವೆಂದು ತೋರುತ್ತಿದೆ" ಎಂದ.

ಚಕ್ರವರ್ತಿ ತಾನು ಮಾಡಿದ ತಪ್ಪನ್ನು ಗ್ರಹಿಸಿದ. ಆಲಿಯಕಡೆ ತಿರುಗಿ" ಜಾಪರ್ ಏನೋ ಮಹಾ ಗಣ್ಯನೆಂದು ಪ್ರಶಂಸೆ ಮಾಡುತ್ತಿರುವೆ. ನಿಮಗೆಲ್ಲ ಕೊಡುತ್ತಿದ್ದುದು ನಮ್ಮದೇ ಹಣ ಅಲ್ಲವೇ? ನಾನು ನಿನ್ನ ಬಡತನ ನೀಗುವಂತೆ ಬೇಕಾದಷ್ಟು ಹಣವನ್ನು ಕೊಡುತ್ತೇನೆ. ತೆಗೆದುಕೊಂಡು ಹೋಗು. ಇನ್ನು ಜಾಪರನ ಮಾತಿಗೆ ತಲೆಹಾಕದೆ, ಆತನನ್ನು ಮರೆತುಬಿಡು ಇನ್ನುಮುಂದೆನೀನು ಹೊಗಳಬೇಕಾದುದು ಸುಲೇಮಾನ್ ಚಕ್ರವರ್ತಿಯನ್ನು, ಅನ್ಯರನ್ನಲ್ಲ; ತಿಳಿಯಿತೇ?" ಎಂದುಹೇಳಿ, ಅವನಿಗೆ ಸಾವಿರ ವರಹಾಗಳನ್ನು ಕೊಡುವಂತೆ ಆಜ್ಞಾಪಿಸಿದ.

ಮರುಕ್ಷಣದಲ್ಲಿ ಸಾವಿರ ಚಿನ್ನದ ನಾಣ್ಯಗಳು ಆಲಿಯಮುಂದೆ ಮೆರೆದವು. ಆತನ ಕಣ್ಣುಗಳು ಕೋರೈಸಿದವು. ಚಕ್ರವರ್ತಿ ಆಲಿಯೊಂದಿಗೆ "ಇವೆಲ್ಲಾ ನಿನ್ನವೇ ತೆಗೆದುಕೋ" ಎಂದ.

ಆಲಿ ತನ್ನ ಎರಡು ಕೈಗಳನ್ನೂ ಆಕಾಶದ ಕಡೆ ಎತ್ತಿ "ಜಾಫರ್ ಮಹಾಶಯಾ, ನೀನು ನಿಜವಾಗಿ ಬಡವರಪಾಲಿನ ಬಂಧು. ಜೀವಿಸಿದ್ದಾಗ ಮಾತ್ರವೇ ಅಲ್ಲದೆ, ಸತ್ತಮೇಲೂ ಸಹ ನೀನು ನನ್ನನ್ನು ಮರೆಯಲಿಲ್ಲ. ನಿನ್ನನ್ನು ನಮ್ಮಿಂದ ದೂರಮಾಡಿದ ಪ್ರಭುಗಳಕೈಯಿಂದಲೇ ನನಗೆ ಸಾವಿರ ವರಹಾ ಕೊಡಿಸಿಕೊಟ್ಟಿರುವೆ" ಎಂದು ಅಪ್ರಯತ್ನವಾಗಿ ಜಾಫರನನ್ನು ಹೊಗಳಲು ಪ್ರಾರಂಭಿಸಿದ.

ತಡೆಯಲಾರದ ದುಃಖದಿಂದ ಚಕ್ರವರ್ತಿ ತಲೆ ತಗ್ಗಿಸಿದ.






**ಯೋ**ಗಿ ವೇಮನ್ನ ಒಂದು ಗುಡಿಯ ಮಂಟಪದಲ್ಲಿ ಸದಾ ಏನೋ ಯೋಚಿಸುತ್ತಾ ಕುಳಿತುಕೊಳ್ಳುವನು. ಆ ಊರಿನಲ್ಲಿದ್ದ ಹುಡುಗರೆಲ್ಲಾ ಆತನ ಸುತ್ತಲೂಸೇರಿ, ಯಾವುದಾದರೊಂದು ಕಥೆ ಹೇಳುವಂತೆ ಪೀಡಿಸುವರು. ಅವರು ಕೇಳಿದಾಗಲೆಲ್ಲಾ ಬೇಸರಪಟ್ಟುಕೊಳ್ಳದೆ, ಆತನು ಯಾವುದೋ ಒಂದು ಕತೆ ಹೇಳುವನು. ಒಂದುದಿನ ಅವರು ಯಥಾಪ್ರಕಾರ ಒಂದು ಕತೆ ಹೇಳುವಂತೆ ಕೇಳಲು ಆತನು ಹೀಗೆ ಪ್ರಾರಂಭಿಸಿದ :—

ಪೂರ್ವಕಾಲದಲ್ಲಿ ಅಜಾತ ಶತ್ರು ವೆಂಬ ಒಬ್ಬ ರಾಜ ನಿದ್ದ. ಆತ ತುಂಬಾ ಒಳ್ಳೆಯವನು. ಆತನಿಗೆ ಯಾರಮೇಲೂ ಕೋಪವಿಲ್ಲ. ಅವಶ್ಯವಾದಾಗ ಮಾತ್ರ ಇಲ್ಲದ ಕೋಪವನ್ನು ತಂದುಕೊಂಡು, ತಪ್ಪಿತಸ್ಥರನ್ನು ಗದರಿಸುವನು, ಅಷ್ಟೇ.

ಅಜಾತ ಶತ್ರು ಒಂದುದಿನ ಸಭೆಯಲ್ಲಿರುವಾಗ ಚಾರರು ಕಂಗಾಲಾಗಿ ಬಂದು "ಪ್ರಭೂ, ಎಲ್ಲಾ ಹಾಳಾಯಿತು" ಎಂದರು.

ರಾಜನು ನಿಧಾನವಾಗಿ "ವಿಷಯ ಹೇಳಿ" ಎಂದ.

"ನಮ್ಮ ರಾಜ್ಯಕ್ಕೆ ಮುತ್ತಿಗೆಹಾಕಲು ಕಳಿಂಗ ರಾಜನು ತನ್ನ ಸೇನೆಯನ್ನು ತೆಗೆದುಕೊಂಡು ಬರುತ್ತಿದ್ದಾನೆ" ಎಂದರು.

ಅಜಾತ ಶತ್ರು ತನ್ನ ಸೈನ್ಯಾಧಿಪತಿಯಕಡೆ ತಿರುಗಿ, "ಹಾಗಾದರೆ ಇನ್ನು ತಡವೇಕೆ? ನಮ್ಮ ಸೇನೆಯನ್ನು ಸಿದ್ಧಪಡಿಸಿ. ನಾನು ಇಷ್ಟರಲ್ಲೇ ಬರುವೆನು. ಶತ್ರುಗಳನ್ನು ಸಂಹರಿಸೋಣ" ಎಂದು ಹೇಳಿ, ಕೂಡಲೇ ಸಭೆಯನ್ನು ಮುಕ್ತಾಯಗೊಳಿಸಿ, ಅರಮನೆಗೆ ಹೊರಟು ಹೋದ.

ಮತ್ತೊಂದು ಕ್ಷಣದಲ್ಲಿ ರಣಭೇರಿ ಮೊಳಗಿತು. ಶಾಂತವಾಗಿದ್ದ ವಾತಾವರಣ ನಿಮಿಷ ಮಾತ್ರದಲ್ಲಿ ಬದಲಾವಣೆ ಹೊಂದಿತು. ಸೈನಿಕರೆಲ್ಲ ಎಲ್ಲಿನ ಕೆಲಸ ಅಲ್ಲಿಯೇ ಬಿಟ್ಟು, ಆಯುಧಗಳಿಗಾಗಿ ಓಡಿದರು. ಕವಚಗಳನ್ನೂ, ಆಯುಧಗಳನ್ನೂ ಧರಿಸಿ, ಕೋಟೆಯಮುಂದೆ ಹಾಜರಾದರು.

'ತೆಲುಗುನಿಂದ'



ಪ್ರಾರಂಭಿಸಿದರು. ಕಳಿಂಗರಾಜನ ಸೇನೆ ಕ್ಷಣ ಮಾತ್ರದಲ್ಲಿ ಚಲ್ಲಾಪಿಲ್ಲಿ ಆಯಿತು.

ಅನಿರೀಕ್ಷಿತವಾಗಿ ಮೇಲೆ ಬಿದ್ದು ರಾಜ್ಯವನ್ನು ವಶಪಡಿಸಿಕೊಳ್ಳಬೇಕೆಂದೂ, ಅಜಾತಶತ್ರುವನ್ನು ಸೆರೆಹಿಡಿದು ಕರೆದುಕೊಂಡು ಹೋಗಬೇಕೆಂದೂ ಹವಣಿಸಿದ್ದ ಕಳಿಂಗರಾಜನ ಪಾಡು ಬೇಡ ಬೇಡವಾಯಿತು. ಅಪಜಯವು ತನ್ನ ಪಾಲಿಗೆ ಶತಸಿದ್ಧವೆಂದು ತಿಳಿಯಿತು. ಕಳಿಂಗ ರಾಜನಿಗೆ. ಇನ್ನು ಅಲ್ಲಿದ್ದರೆ ಪ್ರಾಣ ಉಳಿಯಲಾರದೆಂದು, ರಣರಂಗದಿಂದ ಓಡಿಹೋಗಲು ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿದ. ಆದರೆ ಅಜಾತಶತ್ರುವಿನ ಸೈನ್ಯಾಧಿಕಾರಿ ಕಳಿಂಗರಾಜನನ್ನು ಬೆನ್ನಟ್ಟಿ, ಆತನನ್ನು ಬಂಧಿಸಿ, ಅಜಾತಶತ್ರುವಿನ ಮುಂದೆ ತಂದು ನಿಲ್ಲಿಸಿದ.

ಕಳಿಂಗರಾಜನು ಮೂರ್ಖ. ಆತನು ಸರಹದ್ದಿನಲ್ಲಿದ್ದ ಅಜಾತಶತ್ರುವಿನ ರಾಜ್ಯದ ಪ್ರಜೆಗಳಿಗೆ ಹಿಂದೆ ಎಷ್ಟೋಸಾರಿ ಉಪದ್ರವ ಕೊಟ್ಟಿದ್ದ. ಅರ್ಧರಾತ್ರಿ ಸಮಯದಲ್ಲಿ ನಿದ್ದೆ ಮಾಡುತ್ತಿದ್ದ ಪ್ರಜೆಗಳನ್ನು ದೋಚುವುದು, ಕನಿಕರವಿಲ್ಲದೆ ಸ್ತ್ರೀಯರನ್ನು, ಮಕ್ಕಳನ್ನು, ವೃದ್ಧರನ್ನು ಹತ್ಯೆಮಾಡುವುದು ಆತನ ಕಸುಬಾಗಿತ್ತು. ಹೀಗೆ ತಮಗೆ ತೊಂದರೆ ಕೊಡುತ್ತಿದ್ದ ಕಳಿಂಗರಾಜನಮೇಲೆ ದಂಡೆತ್ತಿ ಹೋಗಿ ಅವನ ರಾಜ್ಯವನ್ನು ವಶಪಡಿಸಿಕೊಳ್ಳ

ಮತ್ತೊಂದು ಕ್ಷಣಕ್ಕೆಲ್ಲಾ ಆಯುಧಪಾಣಿಯಾದ ಚಕ್ರವರ್ತಿ ಅಶ್ವವನ್ನೇರಿ ಅಪಾರವಾದ ತನ್ನ ಸೇನೆಯಮುಂದೆ ನಿಂತುಕೊಂಡ. ಕೆಲ ಕ್ಷಣಗಳಹಿಂದೆ ಸಭೆಯಲ್ಲಿ ಸಿಂಹಾಸನದಮೇಲೆ ಕುಳಿತಿದ್ದ ಶಾಂತಮೂರ್ತಿಯೇ ಈತ? ಭಯಂಕರಮೂರ್ತಿಯಾಗಿದ್ದಾನೆ ಈಗ. ಮಹಾರಾಜನಲ್ಲಿ ಇಷ್ಟೊಂದು ಬದಲಾವಣೆಯಾಗುವುದೆಂದು ಯಾರೂ ನೆನೆಸಿರಲಿಲ್ಲ. ದಂಡನಾಯಕರನ್ನೂ, ಸೇನೆಯನ್ನೂ ಸಂಗಡಕರೆದುಕೊಂಡು, ಹಠಾತ್ತನೆ ಮೇಲೆಬಿದ್ದ.

ರಾಜನ ಪರಾಕ್ರಮ ಕಂಡು ಸೈನ್ಯಕ್ಕೆ ತುಂಬಾ ಉತ್ಸಾಹ, ಹುಮ್ಮಸ್ಸು ಉಂಟಾಯಿತು. ಜಯ ಜಯಕಾರಗಳನ್ನು ಮಾಡುತ್ತಾ ಶತ್ರುಗಳನ್ನು ಚೆಂಡಾಡಲು

ಬೇಕೆಂದು ಅಜಾತಶತ್ರುವಿಗೆ ಪ್ರಜೆಗಳು ಎಷ್ಟೋಸಾರಿ ಅರಿಕೆ ಮಾಡಿಕೊಂಡರು. ಆದರೆ ಆತನಿಗೆ ಯುದ್ಧವೆಂದರೂ, ರಕ್ತಪಾತವೆಂದರೂ ಸರಿಬೀಳುತ್ತಿರಲಿಲ್ಲ. ಜನಗಳಿಗೆ ವಿಪತ್ತು ಉಂಟಾಗದಂತೆ ಬಂದೋಬಸ್ತು ಮಾಡುತ್ತಿದ್ದನೇ ಹೊರತು ಕಳಿಂಗರಾಜನ ಮೇಲೆ ದಂಡೆತ್ತಿ ಹೋಗಲಿಲ್ಲ. ಆದುದರಿಂದ ಅಜಾತಶತ್ರು ಒಬ್ಬ ಹೇಡಿಯೆಂದು ಭಾವಿಸಿದ್ದ ಕಳಿಂಗರಾಜ. ರಾಜ್ಯವನ್ನು ಅಪಹರಿಸಬೇಕೆಂಬ ದುರ್ಬುದ್ಧಿಯಿಂದ ಈಗ ಸೈನ್ಯದೊಂದಿಗೆ ಬಂದಿದ್ದ.




ಅಜಾತಶತ್ರುವೇನು ಅಸಮರ್ಥನಲ್ಲ. ವಿನಾಕಾರಣವಾಗಿ ಯುದ್ಧಹೂಡಲು ಇಷ್ಟವಿರಲಿಲ್ಲವೇ ಹೊರತು, ಶಕ್ತಿಸಾಮರ್ಥ್ಯಗಳನ್ನು ಸಮಯ ಬಂತಾದ್ದರಿಂದ ಈಗ ತೋರಿಸಿದ.

ಹಗ್ಗದಿಂದ ಬಂಧಿಸಲ್ಪಟ್ಟ ಕಳಿಂಗರಾಜನು 'ಎಂತಹ ಪೊರಪಾಟಾಯಿತು. ಈತನ ವಿಶಾಲಭಾವಗಳನ್ನು ಅಪಾರ್ಥಮಾಡಿಕೊಂಡು, ಹೇಡಿ ಎಂದು ಭ್ರಮೆಪಟ್ಟು ಈಗ ಅವಮಾನ ಹೊಂದಬೇಕಾಯಿತು' ಎಂದು ಚಿಂತಿಸಿದ.

ಅಜಾತಶತ್ರುವಿನ ಮಂತ್ರಿಗಳೂ, ಸೇನಾಧಿಕಾರಿಗಳೂ, ಮತ್ತಿತರರೂ ದೈನ್ಯಾವಸ್ಥೆಯಲ್ಲಿರುವ ಕಳಿಂಗರಾಜನನ್ನು ನೋಡಿ 'ಇಂದಿನಿಂದ ನಮಗೆ ಇವನ ಪೀಡೆ ಕಳೆಯುವುದು.' ಎಂದು ಸಂತೋಷಪಟ್ಟರು.

"ಪ್ರಭೂ, ಕೂಡಲೇ ಇವನ ಶಿರಚ್ಛೇದನ ಮಾಡಿಸಿ" ಎಂದು ಮಂತ್ರಿಗಳು ಸಲಹೆ ಕೊಟ್ಟರು.

"ಶಿರಚ್ಛೇದನಕ್ಕಿಂತಲೂ ಇವನಿಗೆ ಚಿತ್ರವಧೆ ವಿಧಿಸುವುದು ಉಚಿತ ಶಿಕ್ಷೆ" ಎಂದರು ದಂಡನಾಯಕರು. "ಹಾಗಲ್ಲ, ಇವನ ಎರಡು ಕಣ್ಣುಗಳನ್ನೂ ಕೀಳಿಸುವುದು ಉತ್ತಮ" ಎಂದು ಸೈನಿಕರು ಸೂಚಿಸಿದರು.

ಈ ರೀತಿಯಾಗಿ ಎಲ್ಲರೂ ಕಳಿಂಗರಾಜನ ಮೇಲೆ ತಮಗಿದ್ದ ಕೋಪವನ್ನು ತೋರಿಸಿದರು

ಕಳಿಂಗರಾಜನು ಆ ಮಾತುಗಳನ್ನು ಕೇಳಿ ಕಂಪಿಸಿದ. "ಪ್ರಭೂ, ಶರಣಾಗತನಾದೆ.

ಬೇಕಾದರೆ ಶಿರಚ್ಛೇದನ ಮಾಡಿಸಿ, ಚಿತ್ರವಧೆ ಮಾತ್ರ ವಿಧಿಸಬೇಡಿ" ಎಂದು ಕೈಯೊಡ್ಡಿ ಬೇಡಿಕೊಂಡ.

ಅಜಾತಶತ್ರು ಸೇನಾಧಿಪತಿಯೊಂದಿಗೆ "ಈತನನ್ನು ಬಿಟ್ಟುಬಿಡಿ" ಎಂದ.

ಈ ಮಾತು ಕೇಳಿ ಕಳಿಂಗರಾಜನಿಗೇ ಆಶ್ಚರ್ಯವಾಯಿತು. ಸೇನಾಧಿಪತಿ ದಿಗ್ಭ್ರಮೆಗೊಂಡು "ಏನು ಪ್ರಭೂ, ಈ ಹಂತಕನನ್ನು ಬಿಡುಗಡೆಮಾಡುವಂತೆ ಆಜ್ಞಾಪಿಸುತ್ತಿರುವಿರಾ? ವಿಷಸರ್ಪವನ್ನು ಹುಡುಕಿಕೊಲ್ಲಬೇಕು ಎಂದು ಹೇಳುವರು. ಹಾಗಿರುವಾಗ ಕೈಗೆಸಿಕ್ಕಿದವನನ್ನು ಬಿಡುವುದೇ? ಇವನು ನಮ್ಮ ಮಗ್ಗುಲಲ್ಲಿರುವಶೂಲ. ನಮ್ಮ ಪಾಡಿಗೆ ನಮ್ಮನ್ನು ಇಟ್ಟಿರಲಾರದೆ ನಮ್ಮಮೇಲೆ ಯುದ್ಧಕ್ಕೆಬಂದ ಧೂರ್ತ. ಇವನನ್ನು ಬಿಡಬೇಕೇ?" ಎಂದ.

ಅದಕ್ಕೆ ಅಜಾತಶತ್ರು "ಈತನು ನಮ್ಮ ಶತ್ರುವೆಂಬಮಾತು ನಿಜ. ಆದುದರಿಂದಲೇ ಯುದ್ಧದಲ್ಲಿ ಎದುರುಗೊಂಡೆವು. ಆದರೀಗ ನಮಗೆ ಶರಣಾಗತನಾಗಿ ಮಿತ್ರನಾಗಿರುವನು. ಇನ್ನು ಹಗೆತನ ಎಲ್ಲಿಬಂತು?" ಎಂದು ಕುದುರೆಯಮೇಲಿಂದ ಇಳಿದು, ಕಳಿಂಗ ರಾಜನ ಹತ್ತಿರಕ್ಕೆಬಂದು, ತಾನೇ ಸ್ವತಃ ಆತನನ್ನು ಬಂಧವಿಮುಕ್ತನನ್ನಾಗಿ ಮಾಡಿದ.

ಯೋಗಿವೇಮನ ಹೇಳಿದ ಕತೆಕೇಳಿ ಮಕ್ಕಳೆಲ್ಲಾ "ಅಜಾತಶತ್ರು ಬಹು ಒಳ್ಳೆಯವನು" ಎಂದು ಮೆಚ್ಚಿಕೊಂಡರು.

"ಹಾಗಾದರೆ ಒಂದು ಪದ್ಯ ಹೇಳುವೆನು.. ಕಲಿತುಕೊಳ್ಳಿ" ಎಂದ ವೇಮನ.

"ಹೇಳಿ ಹೇಳಿ" ಎಂದರು ಮಕ್ಕಳು ಏಕಕಂಠದಿಂದ. ವೇಮನ ತಡಬಡಿಸದೆ ಈ ಪದ್ಯವನ್ನು ಹೇಳಿದ:

"ಕೊಲ್ಲತಕ್ಕ ಶತ್ರು ತನಗೆ ಸೆರೆ ಸಿಕ್ಕರೂ
ಕೊಲ್ಲಬೇಡಾ, ಕೇಡು ಮಾಡಬೇಡಾ
ಪ್ರತಿಯಾಗಿ ಒಳಿತನೇ ಮಾಡಿ ಹೋಗೆನಬೇಕು.
ವಿಶ್ವದಾಭಿರಾಮ ಕೇಳು ವೇಮಾ"

ಕತೆಯಲ್ಲಿನ ಅಜಾತಶತ್ರು ಸತ್ತು ಎಷ್ಟೋವರ್ಷವಾಯಿತು. ಕತೆ ಹೇಳಿದ ವೇಮನ ಸಮಾಧಿಯಾಗಿ ಅನೇಕ ವರ್ಷಗಳು ಗತಿಸಿದವು. ಆದರೆ ಆ ಕತೆ, ಈ ಪದ್ಯ ಮಾತ್ರ ಶಾಶ್ವತವಾಗಿವೆ.





# ಬಣ್ಣ ಬದಲಾವಣೆ

**ಬ**ಡವನೊಬ್ಬನು ಸೌದೆಗಾಗಿ ಅಡವಿಗೆ ಹೋದನು. ಸೌದೆ ಕಡಿದುಕೊಂಡು ಹಿಂತಿರುಗುತ್ತಿರುವಾಗ ಅವನಿಗೆ ಒಂದು ಪೊದೆಯಲ್ಲಿ ಕಪ್ಪನೆಯ ವಸ್ತುವೊಂದು ಕಾಣಿಸಿತು. ಆ ವಸ್ತು ಕಪ್ಪಾಗಿದ್ದರೂಸಹ ಕಾಂತಿಯಿಂದ ಕೂಡಿತ್ತಾದ್ದರಿಂದ 'ಇದರ ಗೊಡವೆ ನಮಗೇಕೆ' ಎಂದೆಣಿಸಿದರೂ, ಅದನ್ನು ಸೂಕ್ಷ್ಮವಾಗಿ ನೋಡಲಾರದೆ ಮುಂದೆನಡೆಯಲು ಅವನಮನಒಡಂಬಡಲಿಲ್ಲ.

ಹತ್ತಿರ ಹೋಗಿ ನೋಡುತ್ತಾನೆ— ಅದೊಂದು ಮಗು. ಕಪ್ಪಾಗಿದ್ದರೂ ಸಹ, ಒಂದು ರೀತಿ ಕಳೆ ಯಿತ್ತು. 'ಭೇಷ್, ಇದು ಆ ಮಹಾಮಹಿಮನ ಮಾಯೆ' ಎಂದೆಂದುಕೊಂಡು, ಆ ಕಟ್ಟಿಗೆ ಕಡಿಯುವವನು ಆ ಶಿಶುವನ್ನು ಮನೆಗೆ ತೆಗೆದುಕೊಂಡು ಹೋದ. ಮಕ್ಕಳಿಲ್ಲದ ಕಾರಣದಿಂದ ಆತನ ಹೆಂಡತಿ ಇದು ವರಪ್ರಸಾದವೆಂದೆಣಿಸಿ, ಅತಿ ಮಮತೆಯಿಂದ ಸಲಹುತ್ತಿದ್ದಳು.

ಕಪ್ಪು ಬಣ್ಣ ಹೋಗಲಾಡಿಸಬೇಕೆಂಬ ಆತುರದಿಂದ ಅವರು ಮಗುವಿಗೆ ಎಷ್ಟೋ ಔಷಧಿಗಳನ್ನು ಲೇಪಿಸಿ, ಸ್ನಾನಮಾಡಿಸಿದರು. ಅದೇನು ವಿಚಿತ್ರವೋ, ದಿನದಿನಕ್ಕೆ ಆ ಕಪ್ಪು ಬಣ್ಣ ಇನ್ನಷ್ಟು ಹೆಚ್ಚಾಗುತಿತ್ತೇಹೊರತು ಕಡಿಮೆಯಾಗುವ ಸೂಚನೆ ಕಾಣಲಿಲ್ಲ. ಸರಿ, ಇದು ಯಾವುದೋ ಶಾಪದಿಂದ ಆಗಿರಬೇಕೆಂದೂ, ಈ ಬಣ್ಣವನ್ನು ಹೋಗಲಾಡಿಸಲು ಪ್ರಯತ್ನಪಡುವುದು ವ್ಯರ್ಥವೆಂದೂ ಆ ಮಗುವಿನ ಸಾಕು ತಂದೆತಾಯಿಗಳು ತಿಳಿದುಕೊಂಡರು.

ಪ್ರಪಂಚದಲ್ಲಿ ಕಪ್ಪಗಿರುವವರು ಎಷ್ಟು ಜನರಿಲ್ಲ? ಅವರಿಂದ ಯಾರಿಗೂ ಯಾವುದೇ ವಿಧವಾದ ತೊಂದರೆ ಇಲ್ಲ. ಆದರೆ ಈ ಮಗುವಿನ ವಿಷಯವೇ ಬೇರೆ. ಟಾರು ಬಣ್ಣಕ್ಕಿಂತಲೂ, ತೊಳೆದ ಕೆಂಡಕ್ಕಿಂತಲೂ ಕಪ್ಪಗಿರುವನು. ಅಷ್ಟೇ ಅಲ್ಲ. ಅವನು ಎಲ್ಲಿ ಏನು ಮುಟ್ಟಿದರೂ ಅಲ್ಲಿ ಕಪ್ಪು ಬಣ್ಣ ಅಂಟಿಕೊಳ್ಳುವುದು. ಆದುದರಿಂದ ಯಾರೂ ಆ ಹುಡುಗನನ್ನು ಹತ್ತಿರ ಸೇರಿಸುತ್ತಿರಲಿಲ್ಲ.

ವಿ. ರತ್ನಾ - ಮಂಗಳೂರು



ಸರಿವಂದಿಗರೆಲ್ಲಾ 'ಲೋ, ಕರಿಯ, ದೂರ ಹೋಗೋ' ಎಂದು ಜರಿದು ಮಾತನಾಡುವರು.

ಎಲ್ಲಿ ಆ ಮಗುವಿನ ಕಪ್ಪು ಬಣ್ಣ ಅಂಟಿಕೊಳ್ಳುವುದೋ ಎಂದು ಆ ಸಾಕು ತಂದೆತಾಯಿಗಳೂ ಸಹ ಅವನಿಗೆ ಯಾವೊಂದು ಕೆಲಸವನ್ನೂ ಹೇಳುತ್ತಿರಲಿಲ. ತಂದೆತಾಯಿಗಳೇ ಈರೀತಿ ನಡೆದುಕೊಂಡರೆ ಬೇರೆಯವರ ಮಾತೇನು?

ತನ್ನನ್ನು ಕಂಡು ಪ್ರತಿಯೊಬ್ಬರೂ ಅಸಹ್ಯಪಟ್ಟುಕೊಳ್ಳುವುದನ್ನೂ, ಜೊತೆ ವಯಸ್ಸಿನವರು ಗೇಲಿಮಾಡುವುದನ್ನೂ ಕಂಡು, ಬೆಳೆದು ದೊಡ್ಡವನಾಗುತ್ತಿದ್ದ ಕರಿಯನ ಮನಸ್ಸಿಗೆ ಕಸವಿಸಿ ಆಯಿತು. 'ಚೆ, ಯಾಕೆ ಬಂದ ಜೀವ ಇದು' ಎಂದುಕೊಂಡು ಪ್ರಾಣದ ಮೇಲೆ ವಿರಕ್ತಭಾವ ಉಂಟಾಯಿತು. ಎಲ್ಲಿಯಾದರೂ ಬಹುದೂರ ಹೋಗಿಬಿಡೋಣವೆಂದು ಒಂದುದಿನ ಮನೆಬಿಟ್ಟ. ದಾರಿಯಲ್ಲಿ ಕರಿಯನಿಗೆ ಒಬ್ಬ ಶ್ರೀಮಂತ ಮತ್ತು ಆತನ ಪತ್ನಿ ಎದುರಾದರು. ಕುದುರೆಸಾರೋಟಿನಲ್ಲಿ ಹೋಗುತ್ತಿದ್ದ ಆ ದಂಪತಿಗಳಿಗೆ ಕರಿಯನು ನಮಸ್ಕಾರಮಾಡಿ, ತನ್ನ ವಿಷಯ ಹೇಳಿಕೊಂಡ.

ಆಗ ಆ ಶ್ರೀಮಂತನು ಮರುಕಗೊಂಡು, "ಮಗೂ, ಕಪ್ಪಗಿದ್ದಮಾತ್ರಕ್ಕೆ ಯಾವ ಕೆಲಸಕ್ಕೂ ನಾಲಾಯಿಕ್ಕು ಎಂದರೇನು? ನಿನ್ನ ವಯಸ್ಸಿನ ಹುಡುಗ ವ್ಯಥಾಕಾಲಹರಣ ಮಾಡುವುದು ಉಚಿತವಲ್ಲ. ನಮ್ಮ ಸಾರೋಟಿನ ಹಿಂದೆ ನಿಂತು "ಇಂತಹವರು ಬರುತ್ತಿದ್ದಾರೆ, ಸರಿಯಿರಿ, ದೂರ ಸರಿಯಿರಿ" ಎಂದು ಕೂಗುತ್ತಿರಬೇಕು. ಶ್ರೀಮಂತರು ಹೋಗುತ್ತಿದ್ದರೆ ಈರೀತಿ ಹೇಳಬೇಕಾದುದು ಒಂದು ಸಂಪ್ರದಾಯ. ಈ ಕಲಸ ನಿನಗೆ ಒಪ್ಪಿಗೆಯಾದರೆ ಊಟ ಬಟ್ಟೆ ಕೊಟ್ಟು ತಿಂಗಳಿಗೆ ಹತ್ತುರೂಪಾಯಿ ಸಂಬಳ ಕೊಡುತ್ತೇವೆ. ನೀನು ನಮ್ಮಿಂದ ದೂರವಾಗಿ ನಿಂತು ಈ ಕೆಲಸ ಮಾಡುವುದರಿಂದ ನಿನ್ನ ಬಣ್ಣ ನಮಗೆ ಸೋಂಕುವ ಭಯವಿಲ್ಲ" ಎಂದರು.

ಕೂಡಲೇ ಅವರ ನೌಕರಿಯಲ್ಲಿ ಸೇರಿಕೊಂಡ ಕರಿಯ. ಆ ತಕ್ಷಣವೇ ಸಾರೋಟಿನ ಹಿಂದೆ ನಿಂತುಕೊಂಡು, ಆ ದೊಡ್ಡಮನುಷ್ಯ ಹೇಳಿದಂತೆ ಕೂಗಲು ಪ್ರಾರಂಭಿಸಿದ. ಇಷ್ಟ

ರಲ್ಲಿ ದುರದೃಷ್ಟವಶಾತ್ ಮೋಡ ಕವಿದು, ಭಾರಿ ಮಳೆ ಆಯಿತು. ಆ ವೇಳೆಗೆ ಕರಿಯನ ಮೈ ಬಣ್ಣ ಕರಗಿ, ದಂಪತಿಗಳು ಧರಿಸಿದ್ದ ಬಿಳಿ ಬಟ್ಟೆಗಳು ಹಾಳಾದವು. ಶ್ರೀಮಂತನಿಗೆ ತುರ್ರನೆ ಕೋಪಬಂತು. "ನೀನು ನಮ್ಮ ನೌಕರಿಯಲ್ಲಿರೋದೂ ಬೇಡ, ಏನೂಬೇಡ ನಮ್ಮ ಬಟ್ಟೆಗಳನ್ನೆಲ್ಲಾ ಹಾಳುಮಾಡಿದೆ. ಮೂದೇವಿ, ನಡಿ, ನಡಿಯಾಚೆ" ಎಂದು ಗದರಿಸಿದ.

ಆದರೆ ಆತನ ಸತೀಮಣಿ ಅವನಮೇಲೆ ಕೋಪಿಸಿಕೊಳ್ಳಲಿಲ್ಲ. ಅವನನ್ನು ಮನೆಗೆ ಕರೆದುಕೊಂಡು ಹೋಗಿ ಒಂದು ತಂಬೂರಿ, ಒಂದು ಕನ್ನಡಿ, ಅವನ ಕೈಗಿತ್ತು, "ಎಲೈ, ಹುಡುಗ, ಈ ತಂಬೂರಿಯನ್ನು ಬಾರಿಸಿ ಕೊಂಡು ಜೀವನನಡೆಯಿಸು. ಇದು ಸಾಧಾ ರಣ ತಂಬೂರಿಗಳಂತೆ ಅಲ್ಲ. ಇದರಿಂದ ಹೊರಡುವ ನಾದದಿಂದ ಮಾನವರ ಹೃದಯ ಗಳೇ ಪವಿತ್ರವಾಗುವುವು. ಹೀಗಿರುವಾಗ ಶರೀರ ಮಾಲಿನ್ಯವನ್ನು ಹೋಗಲಾಡಿಸು ವುದೇ ನಷ್ಟು ಘನವಿಷಯವಲ್ಲ. ನಿನ್ನ ಅದೃಷ್ಟ ಚೆನ್ನಾಗಿದ್ದರೆ, ನಿನ್ನ ಕರ್ಮ ಮುಗಿದು, ಆ ಕಲಿಬಣ್ಣ ಮಾಯವಾಗಲೂ ಬಹುದು" ಎಂದು ಆಶೀರ್ವಾದಮಾಡಿ ಕಳು ಹಿಸಿ ಕೊಟ್ಟಳು.

ಸಂತೋಷದಿಂದ ಕರಿಯನು ಅದನ್ನು ಸ್ವೀಕರಿಸಿ, ತಂಬುರಿಮಿಾಟುತ್ತಾ ದೇಶಾಟನೆ



ಮಾಡುತ್ತಿದ್ದ. ಹಾಗೇ ಹೋಗುತ್ತಾ ಹೋ ಗುತ್ತಾ ಒಂದು ರಾಜ್ಯದಲ್ಲಿ ಕಾಲಿಟ್ಟ. ಅಲ್ಲೊಂದು ಗುಂಪು ಕಾಣಿಸಿತು.

ಈ ಗಲಭೆ ಏನಪ್ಪಾ ಎಂದು ವಿಚಾರಿಸಿದ. ಆದೇಶದ ರಾಜಕುಮಾರಿಗೆ ಸ್ವಯಂವರ ನಡೆ ಯುತ್ತಿದೆಯಂತೆ. ಆ ರಾಜಕುಮಾರಿ ವಿಚಿತ್ರ ವ್ಯಕ್ತಿಯಂತೆ, ಆಕೆ ಜನಿಸಿದಾಗಲೇ ಆಕೆಯ ಶರೀರ ಅಪರೂಪವಾದ ಬಂಗಾರದ ಛಾಯೆ ಯಿಂದ ಹೊಳೆಯುತ್ತ, ದಿನದಿನಕ್ಕೆ ಪ್ರವರ್ಧ ಮಾನ ವಾಗುತ್ತಿತ್ತಂತೆ. ಆಕೆಗೆ ಯುಕ್ತ ವಯಸ್ಸು ಪ್ರಾಪ್ತವಾಗಲು ಸ್ವಯಂವರಕ್ಕೆ ಏರ್ಪಾಟುಮಾಡಲು, ಆಕೆಯ ಕಡೆಯವ ರಾರೂ ಕಣ್ಣೆತ್ತಿ ನೋಡಲೂ ಸಾಧ್ಯವಾಗ ದಷ್ಟು ಕಾಂತಿಯಿಂದ ಪ್ರಕಾಶಸುತ್ತಿದ್ದಳಂತೆ. ಅದರಿಂದ ಎಲ್ಲರೂ ಆಕೆಯನ್ನು 'ಚಿನ್ನದ




ರಾಣಿ' ಎಂದು ಕೂಗುವರೆಂದೂ ತಿಳಿಯ ಬಂತು.

ಆದರೆ ಶರೀರಕಾಂತಿ ಹೆಚ್ಚಾದಷ್ಟೂ, ಆಕೆಯ ಮನಸ್ಸಿನಲ್ಲಿ ದುರಭಿಮಾನವೂ ಹೆಚ್ಚಾಗುತಿತ್ತು. ಸ್ವಯಂವರಕ್ಕಾಗಿ ಬಹು ದೂರದಿಂದ ಬಂದ ಅನೇಕ ಸುಂದರ ತರುಣರನ್ನು ಯಾವುದೋ ಒಂದು ನೆಪದಿಂದ ಗೇಲಿ ಮಾಡಿ ಕಳುಹಿಸಿ ಬಿಡುವಳು. ಆಕೆಯ ಮನಸ್ಸಿಗೆ ಯಾರೂ ನೆಚ್ಚದಿರಲು ತಂದೆ ತಾಯಿಗಳಿಗೆ ದಿಕ್ಕೇದೋರದೆ ಚಿಂತಾಮಗ್ನರಾದರು.

ಇಷ್ಟರಲ್ಲಿ ದೇಶಾಟನೆಮಾಡುತ್ತಾ, ಆ ನಗರದಲ್ಲಿ ಕಾಲಿಟ್ಟ ಕರಿಯನ ತಂಬೂರಿಯಿಂದ ಹೊರಬಿದ್ದ ಮಂಜುಳಗಾನ ರಾಜಕುಮಾರಿಗೆ ಕೇಳಿಸಿತು. ಆ ಹಾಡುಗಾರನನ್ನು ಕರೆತರುವಂತೆ ಹೇಳಿದಳು. ಸಖೀಜನರು ಕರೆದುಕೊಂಡು ಬಂದು ಆಕೆಯಮುಂದೆ ನಿಲ್ಲಿಸಿದರು. ಹಾಡೇನೋ ಮಧುರವಾಗಿತ್ತು, ಆದರೆ ಹಾಡುಗಾರನನ್ನು ನೋಡಿ ಆಕೆಗೆ ತುಂಬಾ ಜಿಗುಪ್ಸೆಯುಂಟಾಯಿತು.

ಈ ವಿಚಿತ್ರ ಪುರುಷನು ಯಾರಪ್ಪಾ ಎಂದು ಅವನಿಂದ ಎಲ್ಲ ವಿವರವನ್ನೂ ಕೇಳಿ ತಿಳಿದುಕೊಂಡಳು. ಕರಿಯನು ಮುಂದುವರಿಸಿ ಹೇಳಿದ: "ಅದಕ್ಕೆಂತಲೇ ನಾನು ವಿರಕ್ತಿ ಹೊಂದಿ ದೇಶಾಟನೆಮಾಡುತ್ತಿದ್ದೇನೆ. ಆದರೆ ನನ್ನ ಈ ಬಣ್ಣ ಹೋಗಲು ಪತಿವ್ರತೆಯೊಬ್ಬಾಕೆ ತುಂಬಾ ಪ್ರಭಾವವುಳ್ಳ ಈ ತಂಬೂರಿಯನ್ನು ನನಗೆ ಕೊಟ್ಟಳು. ಅದರಿಂದ ಕೆಲದಿನಗಳಲ್ಲೇ ನಾನು ಸುಂದರತರುಣನಾಗುವೆನು. ನನ್ನನ್ನು ವಿವಾಹವಾಗುವೆಯಾ?" ಎಂದು ಕೇಳಿದ ಆ ಮುಗ್ಧ.

ಇದನ್ನು ಕೇಳಿ ಮಹಾ ಗರ್ವಿಯಾದ ಆ ರಾಜಕುಮಾರಿ ಗಹಗಹಿಸಿ ನಕ್ಕಳು. "ಎಲೋ, ಕರಿಯ, ನಿನಗೂ ಹೆಂಡತಿ ಬೇಕೇನೂ?" ಎಂದು ಅಪಹಾಸ್ಯಮಾಡಿದಳು. ಆಕೆಯ ಸುತ್ತಮುತ್ತ ಇದ್ದ ಪರಿಚಾರಿಕೆಯರು ಅವನನ್ನುಕಂಡು ನಗಲಾರಂಭಿಸಿದರು. ತನಗೆ ಆದ ಪರಾಭವಕ್ಕೆ ಆತನ ಹೃದಯವು ತುಂಬಾ ಗಾಸಿಗೊಂಡಿತು. ಕೋಪದಿಂದ ಉರಿದು ಬಿದ್ದ ಕರಿಯ. "ನನ್ನ ತಂಬೂರಿಯ ಗಾನಕ್ಕೆ ಮಹಿಮೆಯಿರುವುದಾದರೆ ಈ ರಾಜಕುಮಾರಿಯ ಗರ್ವವೆಂಬ ಮಾಲಿನ್ಯವನ್ನು ತೊಲಗಿಸಲಿ" ಎಂದು ಅಪ್ರಯತ್ನವಾಗಿ

ನುಡಿದು, ತನ್ನ ಪಾಡಿಗೆ ತಾನು ಹಾಡಿಕೊಳ್ಳುತ್ತಾ ಹೊರಟುಹೋದ.

* * *

ಹಾಗೇ ಎರಡುವರ್ಷಕಾಲ ವಿರಕ್ತನಾಗಿ ದೇಶಾಟನೆಮಾಡುತ್ತಿದ್ದ ಕರಿಯನಿಗೆ ಅಕಸ್ಮಾತ್ ಏನೋ ಒಂದು ಆಲೋಚನೆ ಹೊಳೆಯಿತು. ಶ್ರೀಮಂತನ ಹೆಂಡತಿ ತನಗೆ ಕೊಟ್ಟ ಕನ್ನಡಿಯ ನೆನೆಪಾಯಿತು. ತಕ್ಷಣ ಅದರಲ್ಲಿ ತನ್ನ ಮುಖ ನೋಡಿಕೊಂಡ. ಪ್ರತಿಬಿಂಬವನ್ನು ಕಂಡು ಅವನಿಗೇ ಆಶ್ಚರ್ಯವಾಯಿತು. ಆ ಕನ್ನಡಿಯಲ್ಲಿ ಕಾಣಬರುತ್ತಿದ್ದುದು ಕರಿಯನ ಪ್ರತಿಬಿಂಬವಲ್ಲ. ಅದೊಂದು ಸ್ಫುರದ್ರೂಪಿ ರಾಜಕುಮಾರನ ಆಕಾರ! ಏನೀವಿಚಿತ್ರ!!

ಈ ಬದಲಾವಣೆಗೆ ಕರಿಯ ಆಶ್ಚರ್ಯಪಟ್ಟು, ಯಥಾಪ್ರಕಾರ ದೇಶಸಂಚಾರ ಮಾಡುತ್ತಲೇ ಇದ್ದ. ಈಗ ಅಭ್ಯಾಸಬಲದಿಂದ ತಾನು ಕರಿಯನೆಂದು ಹೇಳಿಕೊಳ್ಳುವನೇ ಹೊರತು, ಯಾರೂ ಅವನನ್ನು ಆ ರೀತಿ ಕರೆಯುತ್ತಿರಲಿಲ್ಲ. ಈಗ ಎಲ್ಲರೂ ಅವನ ಹತ್ತಿರ ಬಂದು ಬಹು ವಿನಯದಿಂದ 'ಒಂದು ಹಾಡು ಹೇಳುವಿರಾ?' ಎಂದು ಕೇಳುವರು. ಆತನು ಒಬ್ಬ ಶ್ರೇಷ್ಠ ಹಾಡುಗಾರನೆಂದು ಪ್ರತಿಯೊಬ್ಬರೂ ಹೇಳುತ್ತಿದ್ದರು.

ಎಂದಿನಂತೆಯೇ ಒಂದು ದಿನ ಕರಿಯನಿಗೆ ಒಂದು ಜನಸಮೂಹ ಕಾಣಿಸಿತು. ಅದೊಂದು ವಿಚಿತ್ರವಾದ ಜಾತ್ರೆ. ಆ ಜಾತ್ರೆಯಲ್ಲಿ ಅನೇಕವಿಧವಾದ ತಮಾಷೆಗಳನ್ನು ಪ್ರದರ್ಶಿಸಲಾಗಿತ್ತು. ಅದರಲ್ಲೆಲ್ಲಾ ಭಾರಿ




ಆಕರ್ಷಣೆ 'ಚಿನ್ನದ ರಾಣಿ.' ಕರಿಯನೂ ಸಹ ತಮಾಷೆನೋಡಲು ಅಲ್ಲಿಗೆ ಹೋದ. ಎಲ್ಲಾ ನೋಡಿದ ತರುವಾಯ ಕಟ್ಟಕಡೆಯದಾಗಿ ಚಿನ್ನದ ರಾಣಿಯನ್ನು ನೋಡಲು ಹೋದ.

'ಚಿನ್ನದ ರಾಣಿ'ಯನ್ನು ನೋಡಿ ಚಕಿತನಾದ. 'ಏನು! ಚಿನ್ನದ ರಾಣಿಯೆ? ಮೋಸ, ಕಪಟ. ಬಂಗಾರದ ಬಣ್ಣವನ್ನು ಹಚ್ಚಿಕೊಂಡಿರಬೇಕು, ಇಲ್ಲ ಜನಿಸಿದಾಗಲೇ ಬಂದಿರಬೇಕು ಈ ಬಣ್ಣ. ಹುಟ್ಟುವಾಗಲೇ ಚಿನ್ನದ ಛಾಯೆಯುಳ್ಳ ಕನ್ಯೆ ಒಬ್ಬಳೇ ಇದ್ದಾಳೆ....' ಎಂದು ಏನೋ ಹೇಳಿಕೊಳ್ಳುತ್ತಿರುವಲ್ಲಿ ಆ ಚಿನ್ನದ ರಾಣಿ ಬೆರಗಾದಳು. 'ಈತನು ಯಾರೋ ನನ್ನ ಗುಟ್ಟು ತಿಳಿದವನಾಗಿರಬೇಕು.' ಎಂದು ಯೋಚಿಸಿ, 'ನೀವು ಯಾರು?'

ಎಂದು ಕಾತುರಸ್ವರದಲ್ಲಿ ಕೇಳಿದಳು. ಅದಕ್ಕೆ ಅವನು 'ನನ್ನನ್ನು ಎಲ್ಲರೂ ಕರಿಯನೆಂದು ಕೂಗುವರು' ಎಂದ.

ರಾಜಕುಮಾರಿ ತನ್ನ ಕಣ್ಣುಗಳನ್ನು ತಾನೇ ನಂಬದಾದಳು. 'ಏನು! ಕರಿಯನೇ!! ನೀನು ಕರಿಯನೇ!!!' ಎಂದು ಆಶ್ಚರ್ಯದಿಂದ, ಆತುರದಿಂದ ಕೇಳಿದಳು. ಒಂದು ಸಾರಿ ಪರಿಶೀಲಿಸಿ ನೋಡಿದಳು. ಬಣ್ಣದಲ್ಲಿ ಬದಲಾವಣೆ ಇರಬಹುದು, ರೂಪದಲ್ಲಿ ಯಾವುದೇ ವಿಧವಾದ ಬದಲಾವಣೆ ಕಾಣ ಬರಲಿಲ್ಲ. ಆಕೆ ಅವನನ್ನು ಗುರುತು ಹಿಡಿದಳು. ಕೂಡಲೇ ಅವನ ಪಾದಗಳಮೇಲೆ ಬಿದ್ದು, 'ನೀವು ಹೇಳಿದ ದುದೃಷ್ಟಳಾದ ಚಿನ್ನದ ರಾಣಿ ನಾನೇ. ಆ ದಿನ ನಿಮ್ಮನ್ನು ಅವಮಾನಮಾಡಿ, ನಿಮ್ಮ ಮನಸ್ಸಿಗೆ ನೋವನ್ನುಂಟುಮಾಡಿದ ಕ್ಷಣದಿಂದ ನನ್ನ ಬಂಗಾರದಛಾಯೆ ಕರಗಿಹೋಗಿ, ಕ್ರಮೇಣ ಈಗ ನಾನು ಅಚ್ಚ ಕರಿಯ ಬಣ್ಣಕ್ಕೆ ಬದಲಾಯಿಸಿದ್ದೇನೆ. ನನ್ನನ್ನು ನೋಡಿ ಎಲ್ಲರೂ ಬೇಸರಪಟ್ಟುಕೊಳ್ಳುತ್ತಿರುವರು. ಕೊನೆಗೆ ನನ್ನ ಕರಿಬಣ್ಣ ನೋಡಿ ನನಗೇ ಜಿಗುಪ್ಸೆ ಉಂಟಾಯಿತು. ಆದರಿಂದ ವಿರಕ್ತಳಾಗಿ ದೇಶಸಂಚಾರ ಹೊರಟೆ. ದಾರಿಯಲ್ಲಿ ಈ ತಮಾಷೆ ನಡೆಯಿಸುತ್ತಿರುವ ಯಜಮಾನ ನನ್ನನ್ನು ಕಾಪಾಡಿ, ನನ್ನನ್ನು ಪೋಷಿಸುತ್ತಿರುವನು. ನಿಮ್ಮ ಮನ ನೋಯಿಸಿದ್ದಕ್ಕೆ ನನಗೆ ತಕ್ಕ ಶಿಕ್ಷೆ ಆಯಿತು. ದೇವರ ಸಂಕಲ್ಪದಿಂದ ನಾವು ಮತ್ತೆ ಸಂಧಿಸಿದೆವು. ನನ್ನನ್ನು ಕ್ಷಮಿಸಿ. ನನ್ನ ಗರ್ವ ಭಂಗವಾಯಿತು. ದಯವಿಟ್ಟು ಕೊಟ್ಟ ಶಾಪವನ್ನು ಉಪಶಮನಮಾಡಿಕೊಳ್ಳಿ' ಎಂದು ಅಂಗಲಾಚಿದಳು.

ಕರಿಯನಿಗೆ ಮರುಕ ಉಂಟಾಯಿತು. ಆಕೆಯನ್ನು ಕ್ಷಮಿಸಿದ. ಮತ್ತೆ ತಂಬೂರಿಯಿಂದ ಹಾಡಲು, ಆಕೆಯ ಕಪ್ಪು ಬಣ್ಣ ಕ್ರಮೇಣ ಬದಲಾಯಿಸಿ, ಆಕೆಯ ಶರೀರ ಬಂಗಾರದ ಕಾಂತಿಯಿಂದ ಮೆರೆಯಿತು. ಇಬ್ಬರೂ ಮದುವೆಯಾಗಿ ಸುಖವಾಗಿದ್ದರು.

ಕೆಲಕಾಲಾನಂತರ ತಮ್ಮ ದೇಶಕ್ಕೆ ಹೋಗಲು ಎಲ್ಲರೂ 'ಚಿನ್ನದ ರಾಣಿ'ಯನ್ನು ಗುರುತುಹಿಡಿದರೇ ಹೊರತು, 'ನಾನು ನಿಮ್ಮ ಕರಿಯ' ಎಂದು ಎಷ್ಟು ಹೇಳಿದರೂ ಅವರು ಕರಿಯನ ಮಾತನ್ನು ನಂಬಲಿಲ್ಲ!






# ಪರೋಕ್ಷ ವೈರ

ಒಂದೂರಿನಲ್ಲಿ ಸೌದೆಮಾರಿಕೊಂಡು ಜೀವಿಸುವ ಕಷ್ಟಜೀವಿ ಒಬ್ಬನಿದ್ದ. ಎಲ್ಲರಿಗಿಂತಲೂ ಮುಂಜಾನೆ ಎದ್ದು, ಅಡವಿಗೆಹೋಗಿ, ಸೌದೆ ಕಡಿದು ಹೊರೆಕಟ್ಟಿಕೊಂಡು ಬಂದು, ಊರಿನಲ್ಲಿ ಮಾರಿ, ಬಂದ ಹಣದಿಂದ ಹೊಟ್ಟೆ ಹೊರೆದುಕೊಳ್ಳುವುದು ಅವನ ದಿನಚರಿ.

ತನ್ನ ಕೆಲಸಬೊಗಸೆಗಳನ್ನು ನೋಡಿಕೊಳ್ಳುತ್ತಿದ್ದನೇಹೊರತು, ಬೇರೊಬ್ಬರ ಗೊಡವೆಗೆ ಹೋಗುವವನಲ್ಲ. ಅವನೊಬ್ಬ ಮಹಾಸಾತ್ವಿಕ. ಯಾವುದೇವಿಧವಾದ ದುರಭ್ಯಾಸವಿಲ್ಲ. ಅವನು ನಂಬಿಕಸ್ತ. "ನ್ಯಾಯವಾದಬೆಲೆ ತೆಗೆದುಕೊಂಡು, ಒಣಗಿದ ಸೌದೆ ಕೊಡುವನು. ಸೌದೆಬೇಕಾದರೆ ಅವನ ಹತ್ತಿರವೇ ತೆಗೆದುಕೊಳ್ಳಬೇಕು" ಎಂದು ಜನ ಅವನಲ್ಲಿ ವಿಶ್ವಾಸವನ್ನಿಟ್ಟಿದ್ದರು. ಅನೇಕರು ಅವನ ದುಸ್ಥಿತಿಗೆ ಮರುಕಪಡುತ್ತಿದ್ದರು. ಅವನು ಇದ್ದದ್ದರಲ್ಲಿ ತೃಪ್ತಿಹೊಂದುತ್ತಿದ್ದನೇಹೊರತು, ತನ್ನಲ್ಲಿಲ್ಲದಿರುವುದಕ್ಕಾಗಿ ಎಂದೂ ಆಶಿಸುತ್ತಿರಲ್ಲಿಲ್ಲ. ಅಷ್ಟು ಒಳ್ಳೆಯವ.

ಅವನು ಅಡವಿಗೆ ರಾಜನ ಅರಮನೆಯ ಮುಂದುಗಡೆ ಹಾದು ಹೋಗಬೇಕಾಗಿತ್ತು. ಅಡವಿಗೆ ಹೋಗಲು ಅದೇದಾರಿ. ರಾಜನು ಮೇಲಿನ ಅಂತಸ್ತಿನಿಂದ ದಿನಾ ಇವನನ್ನು ನೋಡುವನು. ರಾಜ ತುಂಬಾ ದಯಾಮೂರ್ತಿ. ಬಡವರಪಾಲಿಗೆ ದೇವರೆಂದು ಹೆಸರುಪಡೆದಿದ್ದ. ಆದರೆ ಅದೇನು ವಿಚಿತ್ರವೋ, ರಾಜನಿಗೆ ಈ ಕಟ್ಟಿಗೆಯವನನ್ನು ಕಂಡಾಗಲೆಲ್ಲಾ ಅದೊಂದುವಿಧವಾದ ಬಾಧೆಯುಂಟಾಗುತಿತ್ತು. ಆದರೂ ಅವನನ್ನು ನೋಡುವುದು ಬಿಡಲಿಲ್ಲ.

ಈಬಾಧೆ ಕಾಲಕ್ರಮೇಣ ಒಂದುವಿಧವಾದ ವೇದನೆಯಾಗಿ ಬದಲಾಯಿಸಿತು. ಸೌದೆಯವನು ಒಬ್ಬ ಕಡುವೈರಿಯಂತೆ ಕಂಡು ಬಂದ ರಾಜನಿಗೆ. ಕೊನೆಗೆ ಈ ಹಗೆತನ ತುಂಬಾ ಮಿತಿಮೀರಿ, ಅವನನ್ನು ಸಾಯಿಸಿದಹೊರತು ತನ್ನ ಸೇಡು ತೀರುವುದಿಲ್ಲ ಎಂಬಷ್ಟು ಕ್ರೋಧವುಂಟು ಮಾಡಿತು. ಆಗ ರಾಜ ಹೀಗೆ ಆಲೋಚಿಸಿದ : "ಕಷ್ಟಜೀವಿಯಾದ ಈ ಸೌದೆಯವನು ನನಗೇನು ಅಪಕಾರಮಾಡಿದ್ದಾನೆ? ಏನು ಮಾಡಬಲ್ಲ? ಹಾಗಾದರೆ ಅವನನ್ನು

ಎಂ. ಕಲ್ಯಾಣಮ್ಮ - ಮೈಸೂರು



ಕಂಡಕೂಡಲೇ ನನಗೇಕೆ ಇಷ್ಟು ಬಾಧೆ ಯುಂಟಾಗಬೇಕು?" ಎಂದು. ಎಷ್ಟೇ ಪ್ರಯತ್ನಿಸಿದರೂ ಕಾರಣತಿಳಿಯದೆ ಮನೋವೇದನೆಯಿಂದ ಕೊರಗುತ್ತಿದ್ದ. ರಾಜ ಈರೀತಿ ಕೊರಗಬೇಕಾದ ಪ್ರಮೇಯವೇ ಇರಲಿಲ್ಲ. "ಈ ಅರಮನೆಯಮುಂದೆ ಹಾದು ಹೋಗಬಾರದು" ಎಂದು ಆಜ್ಞೆಯನ್ನು ಜಾರಿಮಾಡಿ, ಕಟ್ಟಿಗೆಯವನು ತನ್ನ ಕಣ್ಣಿಗೆ ಬೀಳದಂತೆ ಮಾಡಿಕೊಳ್ಳಬಹುದಿತ್ತು. ಆದರೆ ರಾಜ ಆರೀತಿ ಅಧಿಕಾರ ಚಲಾಯಿಸಿ ತನ್ನಬಾಧೆ ನಿವಾರಿಸಿಕೊಳ್ಳಲು ಸಿದ್ಧನಿರಲಿಲ್ಲ. ಅದಕ್ಕೆ ಮೂಲಕಾರಣ ತಿಳಿಯಲು ಆತನು ತಾಪತ್ರಯಪಡುತ್ತಿದ್ದ.

ಇಷ್ಟರಲ್ಲಿ ಮಂತ್ರಿ ಬಂದು, ಪ್ರಭುಗಳು ವ್ಯಾಕುಲ ಚಿತ್ತರಾಗಿರುವುದನ್ನು ಕಂಡು ಹಿಡಿದ. ಸಂಗತಿಸಂದರ್ಭಗಳು ತಿಳಿದ ಕೂಡಲೇ ಆತನಿಗೆ ತುಂಬಾ ಅಶ್ಚರ್ಯವಾಯಿತು. ಕೂಡಲೇ ಸೌದೆಯವನ ಒಳಗುಟ್ಟನ್ನು ತಿಳಿಯಲು ಗೂಢಚಾರರನ್ನು ನೇಮಿಸಿ, ಸ್ವತಃ ತಾನೇ ಸಾವಿರ ಕಣ್ಣುಗಳಿಂದ ನೋಡುತ್ತಿದ್ದ. ಯಾರನ್ನು ಕೇಳಿದರೂ ಸೌದೆಯವನ ವಿಷಯವಾಗಿ ಒಳ್ಳೆಯಮಾತನ್ನೇ ಆಡುತ್ತಿದ್ದರು. 'ಅಮಾಯಕ', 'ಕಷ್ಟಜೀವಿ', 'ನ್ಯಾಯಪರ' ಎಂಬ ಹೊಗಳಿಕೆಯ ಮಾತುಗಳೇಹೊರತು, ಆತನನ್ನು ಯಾರೂ ತೆಗಳುತ್ತಿರಲಿಲ್ಲ.

ಎಷ್ಟು ದಿನವಾದರೂ ಮಂತ್ರಿಗೆ ಆತನ ವಿಷಯ ಸರಿಯಾಗಿ ತಿಳಿಯುದಾಯಿತು. 'ನಿನ್ನ ಬುದ್ಧಿವಂತಿಕೆ ಇಷ್ಟೇಯೇ?' ಎಂದು ಎಲ್ಲಿ ರಾಜನು ದಬಾಯಿಸುವನೋ ಎಂಬ ಭಯ ವುಂಟಾಯಿತು. ಕೊನೆಯ ಪ್ರಯತ್ನವಾಗಿ ಆತನೊಂದು ಕೆಲಸ ಮಾಡಿದ. ಇದ್ದಕ್ಕಿದ್ದಂತೆಯೇ ಆತನು ಒಂದು ರಾತ್ರಿ ಸೌದೆಯವನ ಮನೆ ಶೋಧಿಸಲು ಹೋದ. ಆದರೆ ಆ ಗುಡಿಸಲಿನಲ್ಲಿ ಏನಿದೆ? ಧನಧಾನ್ಯವೇ? ಕಳ್ಳ ಮಾಲೇ, ಇಲ್ಲ ಮತ್ತೇನಾದರೂ ನೂವೇ? ಒಂದು ಮೂಲೆಯಲ್ಲಿ ಸ್ವಲ್ಪ ಸೌದೆ ಮಾತ್ರ ಜೋಡಿಸಲ್ಪಟ್ಟಿತ್ತು. ಅವನ ಕಸುಬು ಅದೇ ಅಲ್ಲವೇ? ಆದ್ದರಿಂದ ತಪ್ಪುಹಿಡಿಯಲು ಕಾರಣವೇನೂ ಕಾಣಿಸಲಿಲ್ಲ.

ಏನೂ ತೋರದೆ ಮಂತ್ರಿ ತಮಾಷೆಯಾಗಿ 'ಏನಣ್ಣಾ, ಈದಿನ ಸೌದೆ ಮಾರಾಟವಾಗ

ಲಿಲ್ಲವೇ? ಅಲ್ಲೇ ಬಿದ್ದಿದೆ' ಎಂದು ಕೇಳಿದ. 'ಅದು ಮಾರುವ ಮಾಲಲ್ಲ ಸ್ವಾಮಿ' ಎಂದು ಮೆಲ್ಲನೆ ನುಡಿದ. ಮಂತ್ರಿ ಕೌತುಕದಿಂದ ಆ ಸೌದೆ ಹೊರೆಯಿದ್ದ ಮೂಲೆಗೆ ಹೋದ. ಆತನು ಹಾಗೆ ಹೋಗಿ ನೋಡುವುದು ತನಗಿಷ್ಟವಿಲ್ಲವೆಂಬಂತೆ ಸೂಚಿಸಿದ ಸೌದೆ ಕಡಿಯುವವ. ಮಂತ್ರಿ ಹೊರೆಯಿಂದ ಒಂದು ಕಟ್ಟಿಗೆ ತೆಗೆದು ಮತ್ತೆ ಪ್ರಶ್ನೆ ಮಾಡಲು 'ಅದು ಸಾಧಾರಣ ಸೌದೆಯಲ್ಲ ಸ್ವಾಮಿ. ಗಂಧದ ಕಟ್ಟಿಗೆ' ಎಂದು ನಿಜ ನುಡಿದ.

'ಅರೆ, ಎಂಥ ಹುಂಬ ಕಣಯ್ಯಾ ನೀನು. ಅದನ್ನು ಮಾರಿದರೆ ಒಳ್ಳೆಬೆಲೆ ಬರುತ್ತದೆಯಲ್ಲೋ' ಎಂದ ಮಂತ್ರಿ, ಅವನ ಹಿತ ಕೋರಿ. ಕಟ್ಟಿಗೆಯುವನ ಮುಖ ಕಪ್ಪಾಯಿತು. ಮಂತ್ರಿಯ ಪಾದಗಳಮೇಲೆ ಬಿದ್ದು 'ಕ್ಷಮಿಸುವೆನೆಂದರೆ ಹೇಳುತ್ತೇನೆ' ಎಂದ. ಮಂತ್ರಿ ಅಭಯವೀಯಲು ಅವನು ಈ ರೀತಿ ಹೇಳಿದ: "ಅಯ್ಯಾ ನನ್ನ ಮನಸ್ಸಿನಲ್ಲಿರುವ ಮಾತನ್ನು ಮುಚ್ಚುಮರೆ ಇಲ್ಲದೆ ಹೇಳುತ್ತಿದ್ದೇನೆ. ಮಹಾರಾಜರು ಕಾರುಣ್ಯಮೂರ್ತಿ. ಬಡವರಿಗೆ ಅವರೆಂದರೆ ಪ್ರಾಣ. ನಾನೂ ಪ್ರಭುಗಳಿಗೆ ಗೌರವ ಸಲ್ಲಿಸುವೆನು. ಆದರೇನು, ನನ್ನನ್ನು ಹಿಡಿದು ಪೀಡಿಸುತ್ತಿರುವ ಈ ಬಡತನದ ಬಾಧೆಯಿಂದ ನನಗೊಂದು ದುರ್ಬುದ್ಧಿ ಜನಿಸಿತು, ಆಳುವ ಮಹಾಸ್ವಾಮಿಯವರಿಗೆ ವಯಸ್ಸಾಯಿತು. ಇನ್ನೆಷ್ಟುಕಾಲ ಜೀವಿಸು




ತ್ತಾರೆ, ಹೇಳಿ? ಅವರು ತೀರಿಕೊಂಡ ದಿನ ಗಂಧದ ಕಟ್ಟಿಗೆಗೆ ಒಳ್ಳೇ ಗಿರಾಕಿ ಬರುತ್ತದೆ. ಆದುದರಿಂದ ಗಂಧದ ಚಕ್ಕೆಗಳನ್ನು ಭದ್ರಪಡಿಸಿದ್ದರೆ ಅಂದು ಹೇಳಿದಷ್ಟು ಹಣ ಕೊಟ್ಟು ಕೊಳ್ಳುವರು. ನನಗೆ ಹಿಡಿದಿರುವ ಈ ಬಡತನ ಮಾಯವಾಗುವುದು." ಇದನ್ನು ಕೇಳಿ ಮಂತ್ರಿ ನಿಶ್ಚೇಷ್ಟಿತನಾದ.

ರಾಜನಿಗೆ ಈ ವರ್ತಮಾನ ತಿಳಿಯಿತು. ಕಟ್ಟಿಗೆಯುವನ ವೇದನೆ ಕಂಡುಕೊಂಡು, ಅವನ ಬಡತನ ನೀಗುವಂತೆ ಅಪಾರ ಹಣ ಕೊಟ್ಟು ಕಳುಹಿಸಿದ. ತನ್ನ ಮನಸ್ಸಿನ ಬಾಧೆಗೆ ಕಾರಣ ಪರೋಕ್ಷವಾಗಿ ಕಟ್ಟಿಗೆಯುವನು ಅನುಭವಿಸುತ್ತಿದ್ದ ಈ ವೇದನೆಯೇ ಇರಬಹುದೆಂದು ಮಹಾರಾಜನು ನಿರ್ಧರಿಸಿದ.




ರಾಮಾಶಾಸ್ತ್ರಿಗಳು ಜೋತಿಷ್ಯಹೇಳಿಕೊಂಡು ತಮ್ಮ ಸಂಸಾರ ಸಾಗಿಸುತ್ತಿದ್ದರು. ಅವರು ಹೇಳಿದ ಜೋತಿಷ್ಯ ನಿಜವಾಯಿತಾದುದರಿಂದ ಒಬ್ಬ ಶ್ರೀಮಂತನು ಶಾಸ್ತ್ರಿಗಳಿಗೆ ಒಂದು ಹಸುವನ್ನು ಬಹುಮಾನವಾಗಿ ಕೊಟ್ಟ. ಆತನು ಹಾಲು ಕರೆದಾದಮೇಲೆ ಹಸುವನ್ನು ಬೀದಿಗೆ ಬಿಡುವನು.

ಈ ರೀತಿ ಬಿಡುತ್ತಿದ್ದುದರಿಂದ ಆ ಹಸು, ರಾತ್ರಿ ಹೊತ್ತು ಸುತ್ತ ಮುತ್ತಲಿರುವ ಮನೆಗಳ ತೋಟಗಳನ್ನು ಹಾಳುಮಾಡುತಿತ್ತು. ಬೆಳಗಿನ ಹೊತ್ತು ಮಕ್ಕಳನ್ನು ಹಾಯುತಿತ್ತು. ಇದು ಬಹುತೇಕ ನೆರೆ ಮನೆಯ ಮಾಸ್ತರು ರಾಜಾರಾಯರಿಗೆ ತುಂಬಾ ಕಷ್ಟವಾಗುತಿತ್ತು. ಏಕೆಂದರೆ ಅತನಿಗೆ ಮನೆ ತುಂಬ ಮಕ್ಕಳು. ಹಸು ಕಣ್ಣಿಗೆ ಬಿದ್ದಾಗಳೆಲ್ಲಾ ಭಯಗೊಳ್ಳುತ್ತಿದ್ದರು. ಯಾವ ಮಗುವಿಗೆ ಏನು ಅಪಾಯ ಮಾಡುತ್ತೋ ಅಂತ.

'ಹಸುವನ್ನು ಕಟ್ಟಿ ಹಾಕಿ' ಎಂದ್ಯ ಗಿಣಿಗೆ ಹೇಳಿದಂತೆ ಮಾಸ್ತರರು ಶಾಸ್ತ್ರಿಗಳಿಗೆ ಹೇಳಿದರು. ಶಾಸ್ತ್ರಿಗಳು ಅವರ ಮಾತಿಗೆ ಕಿವಿಗೊಡದೆ "ಭಯ ಭಕ್ತಿಗಳಿಲ್ಲದೆ ಮಕ್ಕಳನ್ನು ಬೀದಿಯಲ್ಲಿ ಬಿಡುವುದೆಂದರೇನು? ಹಸುವನ್ನು ಕಟ್ಟಿ ಹಾಕಲಾರೆ. ನಿಮ್ಮಿಷ್ಟ ಬಂದಂತೆ ಮಾಡಿಕೊಳ್ಳಿ" ಎಂದು ದಬಾಯಿಸಿದರು.

"ಶಾಸ್ತ್ರಿಗಳಿಗೆ ಬುದ್ಧಿ ಹೇಳಬೇಕು" ಎಂದು ನಿರ್ಧರಿಸಿದರು ಮಾಸ್ತರು. ಮಾರನೆಯ ದಿನ ಬೆಳಗಾಗುವ ವೇಳೆಗೆ ಮಾಸ್ತರ ಮನೆಯಮುಂದೆ ಒಂದು ಬೋರ್ಡು ತಗಲಿ ಹಾಕಿತ್ತು. ಆ ಹಲಗೆಮೇಲೆ ಈರೀತಿ ಬರೆದಿತ್ತು:

"ಅದ್ಭುತ ಜೋತಿಷ್ಯ. ಒಬ್ಬಾನೊಬ್ಬ ಯೋಗಿಪುಂಗವನ ವರಪ್ರಸಾದ. ಲೋಕೋಪಕಾರಾರ್ಥವಾಗಿ ಉಚಿತವಾಗಿಹೇಳಬೇಕೆಂದು ಆ ಮಹಾಮಹಿಮನ ಆಜ್ಞೆ. ಈ ಸಮಯ ಕಳೆದುಕೊಳ್ಳಬೇಡಿ. ಪ್ರಶ್ನಗಳನ್ನುಹೇಳಿ ಪ್ರಜೆಗಳನ್ನು ದೋಚುವ ಮೋಸಗಾರರನ್ನು ನಂಬ ಬೇಡಿ. ಸಮಯಬೆಳಗ್ಗೆ 7 ರಿಂದ 9. ಸಾಯಂಕಾಲ 4 ರಿಂದ 6."

ಕೃಷ್ಣಪ್ಪ – ಹೊಳೆ ನರಸೀಪುರ

ಯಥಾಪ್ರಕಾರ ರಾಮಾಶಾಸ್ತ್ರಿಗಳ ಮನೆ ಮುಂದಿದ್ದ ಜಗಲಿಯಮೇಲೆ ಕುಳಿತು ಆತನಿಗಾಗಿ ಕಾದುಕೊಂಡಿದ್ದ ಜನರನ್ನು ಮಾಸ್ತರ ಮನೆಮುಂದೆ ಇದ್ದ ಬೋರ್ಡ್ ತಟ್ಟನೆ ಆಕರ್ಷಿಸಿತು. ಕೂಡಲೇ ಅವರು ಮಾಸ್ತರರಮನೆಗೆ ಬಂದರು. ಶಾಸ್ತ್ರಿಗಳ ಮನೆಮುಂದೆ ಜಗಲಿಯ ಮೇಲೆ ಬಿಸಿಲಿನಲ್ಲಿ ಕುಳಿತುಕೊಳ್ಳುವ ಪ್ರಮೇಯವಿಲ್ಲ. ಮಾಸ್ತರಮನೆಯ ವಿಶಾಲವಾದ ವೆರಾಂಡಾದಲ್ಲಿ ಕುರ್ಚಿಗಳಲ್ಲಿ ಸುಖವಾಗಿ ಕುಳಿತುಕೊಳ್ಳಬಹುದು. ಪ್ರತಿಫಲಾಪೇಕ್ಷೆ ಇಲ್ಲದೆ, ಕೇವಲ ಪಾರಮಾರ್ಥಿಕದೃಷ್ಟಿಯಿಂದ ಈತನು ಮಾನವಸೇವೆಮಾಡಲು ಕಂಕಣಕಟ್ಟಿದ್ದಾನೆ. ಎಷ್ಟು ಔದಾರ್ಯ ಈತನದು ಎಂದು ಎಲ್ಲರೂ ಮೆಚ್ಚಿಕೊಳ್ಳುತ್ತಿದ್ದರು.

ಇಷ್ಟೆಲ್ಲಾ ಅನುಕೂಲಗಳಿರುವಾಗ ಯಾರು ಆ ಶಾಸ್ತ್ರಿಗಳ ಮನೆಕಡೆ ಮುಖತೋರಿಸುತ್ತಾರೆ? ಆ ಶಾಸ್ತ್ರಿಯ ಜ್ಞಾನ ಅಷ್ಟಕ್ಕಷ್ಟೇ. "ಹೊಟ್ಟೆಪಾಡಿಗಾಗಿ ಏನೋ ಒಂದಿಷ್ಟು, ಓದಿಕೊಂಡು ನಾಟಕ ಆಡುತ್ತಿರುವನೇ ಹೊರತು, ಸ್ವಲ್ಪವಿವರವಾಗಿ ಹೇಳೆಂದರೆ ಹೇಳುವ ಚೈತನ್ಯ ವೆಲ್ಲಿದೆ?" ಎಂದು ಜನಗಳಲ್ಲಿ ಶಾಸ್ತ್ರಿಗಳೆಂದರೆ ಒಂದುರೀತಿ ಅಸಡ್ಡೆ ಜನಿಸಿತು. ಆತನ ಬಾಯಿಯಲ್ಲಿ ಮಣ್ಣು ಬಿತ್ತು.

ನಾಲ್ಕು ದಿನಗಳಿಗೆಲ್ಲಾ ವಿಲಿವಿಲಿ ಒದ್ದಾಡಿದರು ಶಾಸ್ತ್ರಿಗಳು. ಬೇರೊಬ್ಬರ ಕಣ್ಣಿಗೆ ಬೀಳದಂತೆ ಒಂದು ರಾತ್ರಿ ಮಾಸ್ತರರ ಮನೆಗೆ ಹೋಗಿ ಅವರ ಕಾಲಿನಮೇಲೆ ಬಿದ್ದು "ನನಗೆ ಬುದ್ಧಿಬಂತು" ಎಂದು ಗಲ್ಲದಲ್ಲಿ ಬಡೆದುಕೊಂಡರು. ಮತ್ತೊಂದುಸಾರಿ ಅವರಿಂದ ಹೇಳಿಸಿಕೊಳ್ಳದೆ ಹಸುವನ್ನು ಕಟ್ಟಿಹಾಕಿದರು.

ಯಥಾಪ್ರಕಾರ ಮಾರನೇಯದಿನ ಎಲ್ಲರೂ ಮಾಸ್ತರರ ಮನೆಗೆ ಬಂದರು. ಆದರೆ ಅಲ್ಲಿ ಬೋರ್ಡು ಕಾಣಿಸಲಿಲ್ಲ. ಜನ "ಏನಿದು ವಿಚಿತ್ರ" ಎಂದು ಮಾಸ್ತರರನ್ನು ಕೇಳಿದರು.

"ಏನಿಲ್ಲ, ಸರಕಾರಿ ಉದ್ಯೋಗದಲ್ಲಿದ್ದುಕೊಂಡು ಬೇರೆ ಕೆಲಸಮಾಡಕೂಡದೆಂದು ಆಜ್ಞೆ ಬಂದಿದೆ" ಎಂದು ಹೇಳಿ ತಪ್ಪಿಸಿಕೊಂಡರು ಮಾಸ್ತರು.



# ಮಣಿ: ರತ್ನಗಳು

ಸಾವಿರಾರು ವರ್ಷಗಳಹಿಂದೆ ಆರಾವಳಿ ಪರ್ವತಪ್ರಾಂತ್ಯವನ್ನು ಒಬ್ಬ ರಾಜನು ಪಾಲಿಸುತ್ತಿದ್ದನು. ಆತನಿಗೆ ವಿಮಲೆ, ಶ್ಯಾಮಲೆ ಎಂಬಿಬ್ಬರು ಹೆಣ್ಣುಮಕ್ಕಳು. ಅವರಿಬ್ಬರೂ ಅಪೂರ್ವ ಅಂದಗಾತಿಯರು.

ಒಬ್ಬ ಯೋಗೀಶ್ವರನ ವರಪ್ರಸಾದದಿಂದ ಬಾಲ್ಯದಲ್ಲೆ ಅವರಿಬ್ಬರಿಗೆ ಒಂದು ವಿಚಿತ್ರಶಕ್ತಿ ಲಭಿಸಿತು. ವಿಮಲೆ ಯಾವುದೇಕಾರಣದಿಂದಲಾದರೂ ನಕ್ಕರೆ ಆಕೆಯ ಬಾಯಿಯಿಂದ ರತ್ನಗಳು ಉದುರುವುವು. ಶ್ಯಾಮಲೆ ಅತ್ತರೆ ಆಕೆಯ ಕಂಬನಿಯ ಒಂದೊಂದು ತೊಟ್ಟು ಒಂದೊಂದು ದಿವ್ಯಮಣಿಯಾಗಿ ಬದಲಾಯಿಸುವುದು.

ಯೋಗೀಶ್ವರನು ನೀಡಿದ ಈ ವರಕ್ಕೆ ರಾಜ ಮತ್ತು ರಾಣಿಯರು ತಂಬಾ ಹರ್ಷಗೊಂಡರು. ಕಾರಣಾಂತರದಿಂದ ಬೊಕ್ಕಸ ಬರಿದಾದರೆ ತಮ್ಮ ಮಕ್ಕಳ ನಗುವಿನಿಂದ, ಇಲ್ಲವೆ ಅಳುವಿನಿಂದ ಖಜಾನೆಯನ್ನು ರತ್ನ ಮಾಣಿಕ್ಯಗಳಿಂದ ತುಂಬಿಸಬಹುದೆಂಬ ದಿಮಾಕು ಅವರಲ್ಲಿ ನೆಲೆಸಿತು.

ಅದೇನುಕರ್ಮವೋ, ಆ ದಂಪತಿಗಳು ನೆನೆಸಿದ್ದಂತೆಯೇ ಕೆಲದಿನಗಳಲ್ಲಿ ಅವರ ಬೊಕ್ಕಸ ಬರಿದಾಯಿತು. ಆದರೆ ಅವರು ಯೋಚಿಸಿದ್ದಂತೆ ವಿಮಲೆಯ ನಗುವಿನಿಂದ, ಶ್ಯಾಮಲೆಯ ಅಳುವಿನಿಂದ ಅದು ಮತ್ತೆ ತುಂಬುವ ಮಾರ್ಗ ಕಾಣಬರಲಿಲ್ಲ.

ಎಷ್ಟೇ ನಗುಬರುವ ಮಾತುಗಳನ್ನಾಡಿದರೂ ವಿಮಲೆ ನಗು ಬೀರುತ್ತಿರಲಿಲ್ಲ. ಎಷ್ಟೇ ದುಃಖಮಯವಾದ ವಿಷಯ ಹೇಳಿದರೂ ಶ್ಯಾಮಲೆಯ ಕಣ್ಣಿಂದ ಒಂದು ತೊಟ್ಟು ಕಣ್ಣೀರು ಮಿಡಿಯುತ್ತಿರಲಿಲ್ಲ.

ಇದನ್ನು ಕಂಡು ರಾಜನಿಗೆ ಮತಿಹೋದಂತೆ ಆಯಿತು. ಮಂತ್ರಿಯೊಂದಿಗೆ ಆಲೋಚಿಸಿದ. ಕೊನೆಗೆ ಒಂದುನಿರ್ಣಯಕ್ಕೆ ಬಂದರು. ಆ ನಿರ್ಣಯವನ್ನು ಪ್ರಕಟನೆಯಮೂಲಕ ದೇಶದೇಶಗಳಲ್ಲಿ ಡಂಗುರ ಹೊಯ್ಸಿದರು. "ಯಾರಾದರೂಸರಿ ತನ್ನ ಕುಮಾರ್ತೆಯರಾದ ವಿಮಲೆ, ಮತ್ತು ಶ್ಯಾಮಲೆಯರಿಗೆ ನಗೂ, ಮತ್ತು ವ್ಯಾಕುಲವನ್ನುಂಟು ಮಾಡಿದರೆ ಅವರಿಗೆ ಅರ್ಧರಾಜ್ಯದೊಂದಿಗೆ ಆ ಹುಡುಗಿ

ಎಸ್. ಅನಂತಯ್ಯ - ನೀಲೇಶ್ವರ



ಯನ್ನೂ ಕೊಟ್ಟು ವಿವಾಹ ಮಾಡುತ್ತೇವೆ" ಎಂಬುದು ಆ ಪ್ರಕಟನೆಯ ಮುಖ್ಯಾಂಶ.

ಅನೇಕಾನೇಕ ರಾಜಕುಮಾರರು ಬರುತ್ತಿದ್ದರು. ತಮ್ಮ ಬುದ್ಧಿವಂತಿಕೆಯನ್ನೆಲ್ಲಾ ಖರ್ಚುಮಾಡಿ ಎಷ್ಟೇವಿಧವಾದ ಕತೆ ಹೇಳಿದರೂ ವಿಮಲೆ ನಗಲಿಲ್ಲ, ಶ್ಯಾಮಲೆ ಅಳಲಿಲ್ಲ. ಅವರುಹೇಳುವ ಕತೆಕೇಳಿ, ಸುತ್ತಿಮುತ್ತಲಿರುವ ಜನ ಹೊಟ್ಟೆ ಬಿರಿಯುವಂತೆ ನಗುತ್ತಿದ್ದರೆ ವಿಮಲೆಮಾತ್ರ ಖಿನ್ನಳಾಗಿ ಕಂಬನಿ ಸುರಿಸುವಳು. ದುಃಖಮಯವಾದ ಕತೆಕೇಳಿ ಎಲ್ಲರೂ ಚಿಂತೆಯಿಂದ ವಿಲಪಿಸುತ್ತಿದ್ದರೆ ಶ್ಯಾಮಲೆ ಪಕಪಕನೆ ನಗುವಳು.

ಹೀಗೇ ಕೆಲಕಾಲ ಕಳೆಯಿತು. ನಿರಾಶೆಯಿಂದ ಅನೆಕಮಂದಿ ರಾಜಕುಮಾರರೂ, ಇತರ ಯುವಕರೂ ಬಂದದಾರಿ ಹಿಡಿಯುತ್ತಿದ್ದರು. ರಾಜ ರಾಣಿಯರು ಅತೀವ ಚಿಂತೆಯಿಂದ ಕೊರಗಿಕಡ್ಡಿಯಾಗುತ್ತಿದ್ದರು.

ಹೀಗೇ ಇರುವಲ್ಲಿ ಒಬ್ಬ ಯುವಕನು ರಾಜಭವನಕ್ಕೆ ಬಂದ. ಅವನ ಹೆಸರು ಆದಿತ್ಯ. ಆದಿತ್ಯನು ಮನಶ್ಶಾಸ್ತ್ರ ಪಂಡಿತ. "ದಿನಾ ಏಕಿಷ್ಟೊಂದು ಜನರನ್ನು ನನ್ನಹತ್ತಿರ ಕಳುಹಿಸುವಿರಿ? ನನಗೆ ನಗಲೇ ಸಾಧ್ಯವಿಲ್ಲ" ಎಂದು ಬೇಸರ ಪಟ್ಟುಕೊಳ್ಳುತ್ತಿದ್ದ ವಿಮಲೆಯನ್ನು ನೋಡಲು ಆದಿತ್ಯನಿಗೆ ಅನುಮತಿಕೊಟ್ಟ ರಾಜ. ಎಲ್ಲರಂತೆ ಆದಿತ್ಯನೂಸಹ ವಿಮಲೆಯ ಹತ್ತಿರ ಹೋಗಿ ಕತೆ ಆರಂಭಿಸಿದ. ಆದರೆ ಅದು ನಗಿಸುವ ಕತೆಯಲ್ಲ; ದುಃಖವನ್ನುಂಟು ಮಾಡುವ ಕತೆ. ಎಲ್ಲರೂ ಬೆರಗಾದರು.

ಕತೆ ಕೇಳುತ್ತಿದ್ದವರೆಲ್ಲರೂ ಐದಾರು ನಿಮಿಷಗಳಲ್ಲೇ ದುಃಖಸಾಗರದಲ್ಲಿ ಮುಳುಗಿ ಕಂಬನಿಸುರಿಸುತ್ತಿದ್ದರು. ಆದರೆ ಅದುವರೆವಿಗೂ ಉದ್ವೇಗರಹಿತಳಾಗಿದ್ದ ವಿಮಲೆ ಹಠಾತ್ತನೆ ಹೊಟ್ಟೆ ಹುಣ್ಣಾಗುವಂತೆ ಪಕಪಕನೆ ನಕ್ಕಳು. ಆ ನಗುವಿನೊಂದಿಗೆ ಆಕೆಯ ಬಾಯಿಂದ ವಿವಿಧಕಾಂತಿಗಳನ್ನು ಚಿಮ್ಮುವ ಬಣ್ಣ ಬಣ್ಣದ ರತ್ನಗಳು ಕೆಳಗಿದ್ದ ರತ್ನಗಂಬಳಿಯಮೇಲೆ ಬಿದ್ದಿತು. ಎಲ್ಲರೂ ವಿಸ್ಮಯಗೊಂಡರು.





ಆದಿತ್ಯನು ಕತೆಹೇಳ ಲಾರಂಭಿಸಿದ. ಆದರೆ ಎಂತಹ ಕತೆಗೊತ್ತೇ? ಸಾಯುತ್ತಿರುವವನೂ ಸಹ ಎದ್ದು ಬಂದು ಹೊಟ್ಟೆ ಹುಣ್ಣಾಗುವಂತೆ ನಗುವ ಕತೆ!

ರಾಜ, ರಾಣಿ ಮತ್ತು ಅವರ ಪರಿವಾರ ಆದಿತ್ಯನ ಕತೆಕೇಳಿ ಹೊಟ್ಟೆ ಹುಣ್ಣಾಗುವಂತೆ ನಗುತ್ತಿರುವರು. ಆದರೆ ಶ್ಯಾಮಲೆ ಅನಿರೀಕ್ಷಿತವಾಗಿ ಗೋಳೋ ಎಂದು ಅಳುತ್ತಾ, ತಟತಟನೆ ಕಣ್ಣೀರು ಸುರಿಸಿದಳು. ಒಂದೊಂದು ಕಂಬನಿಯೂ, ಧಗಧಗನೆ ಹೊಳೆಯುವ ಒಂದೊಂದು ದಿವ್ಯ ಮಣಿಯಾಗಿ ಬದಲಾಯಿಸಿ ಆ ಹಾಸಿಗೆಯ ಮೇಲೆ ಉರುಳಾಡುತ್ತಿತ್ತು.

ಎಲ್ಲರೂ ಮತ್ತೊಂದುಸಾರಿ ಬೆರಗಾದರು. "ಆದಿತ್ಯನು ಅರ್ಧ ರಾಜ್ಯವನ್ನೂ, ರಾಜಕುಮಾರಿಯರನ್ನೂ ಗಿಟ್ಟಿಸಿಕೊಂಡನು" ಎಂದುಕೊಂಡರು.

ಇಷ್ಟರಲ್ಲಿ ಮಂತ್ರಿಯ ಕಿವಿಯಲ್ಲಿ ರಾಜ ಏನೋ ಗುಸುಗುಟ್ಟಿದ.

ರಾಜ ರಾಣಿಯೊಂದಿಗೂ ಸಹ ಏನೋ ರಹಸ್ಯ ಹೇಳಿ "ಆದಿತ್ಯನು ಅಪ್ರತಿಮಶಕ್ತಿವಂತನೆಂಬುದರಲ್ಲಿ ಸಂದೇಹವೇ ಇಲ್ಲ. ರಾಜಕುಮಾರಿಯರಿಬ್ಬರನ್ನೂ ವಿವಾಹವಾಡುವುದು ಶಾಸ್ತ್ರವಿರುದ್ಧವಷ್ಟೆ. ಆದುದರಿಂದ ಆತನು ಯಾರನ್ನು ಕೋರುವನೋ ಆ ರಾಜ

ಇಷ್ಟರಲ್ಲಿ ರಾಜನ ಕಿವಿಯಲ್ಲಿ ರಾಣಿ ಏನೋ ಹೇಳಿದಳು.

ಆಗ ರಾಜನು ಮಂತ್ರಿಯೊಂದಿಗೆ ತುಸ ಹೊತ್ತುಗುಟ್ಟಾಗಿ ಮಾತನಾಡಿ "ಆದಿತ್ಯನು ಅಸಾಮಾನ್ಯ ಶಕ್ತಿವಂತನೆಂದು ಹೇಳಲು ಸಂದೇಹವೇ ಇಲ್ಲ. ಇನ್ನು ಕುಮಾರಿ ಶ್ಯಾಮಲೆಯ ಕಣ್ಣಿಂದ ಕಂಬನಿ ಮಿಡಿಯುವಂತೆ ಮಾಡಿದುದೇ ಆದರೆ ನಾನು ಪ್ರಕಟನೆ ಹೊರಡಿಸಿದ್ದಂತೆ ನಡೆದುಕೊಳ್ಳುವೆನು" ಎಂದ.

ಆದಿತ್ಯ ನಿರುತ್ಸಾಹಪಡಲಿಲ್ಲ. ರಾಜನ ಪರಿವಾರದೊಂದಿಗೆ ಶ್ಯಾಮಲೆಯ ಅಂತಃಪುರವನ್ನು ಪ್ರವೇಶಿಸಿದ. ಶ್ಯಾಮಲೆ ತನ್ನ ಸಖಿಯರೊಂದಿಗೆ ಸುಪ್ಪತ್ತಿಗೆಯಮೇಲೆ ಸುಖಾಸೀನಳಾಗಿದ್ದಳು.

ಕುಮಾರಿಯಿಂದ ಎರಡನೇಯಾಕೆಗಿಂತಲೂ ಹೆಚ್ಚು ರತ್ನಗಳನ್ನೊ, ಮಣಿಗಳನ್ನೊ ಉದುರಿಸುವ ಹಾಗೆ ಮಾಡಿದಪಕ್ಷಕ್ಕೆ ನಾನು ಪ್ರಕಟಿಸಿದ ವಾಗ್ದಾನದಂತೆ ನಡೆಯುವೆನು" ಎಂದ.

ಈ ಮಾತುಗಳನ್ನು ಕೇಳಿ ಆದಿತ್ಯನು ನಿರುತ್ಸಾಹಗೊಂಡ.

ದೇವಕನ್ಯೆಯನ್ನು ಮೀರಿಸುವ ವಿಮಲೆಯನ್ನು ವಿವಾಹವಾಗಬೇಕೆಂದು ಆತನ ಅಭಿಲಾಷೆ. ಆದರೆ ರಾಜನ ಮಾತಿನಲ್ಲಿರುವ ಗೂಢಾರ್ಥ ಇದಕ್ಕೆ ಅಡ್ಡಿಯಾಗುವುದೇನೋ ಎಂದು ಆತನಿಗೆ ಹೆದರಿಕೆ ಯುಂಟಾಯಿತು. ಆದರೂ ಹೆದರಲಿಲ್ಲ.

ವಿಮಲೆ ಮತ್ತು ಶ್ಯಾಮಲೆಯರನ್ನು ಪಕ್ಕಪಕ್ಕದಲ್ಲಿ ಕೂರಿಸಿದರು. ಯಾವುದಾದರೊಂದು ಕತೆ ಹೇಳಿ ವಿಮಲೆಯನ್ನು ನಗುವಂತೆಯೂ, ಶ್ಯಾಮಲೆಯನ್ನು ಅಳುವಂತೆಯೂ ಮಾಡಬೇಕು ಆದಿತ್ಯ. ಆ ಸಂದರ್ಭದಲ್ಲಿ ವಿಮಲೆ ನಗುವಾಗ ಉದುರುವ ರತ್ನಗಳನ್ನೂ, ಶ್ಯಾಮಲೆ ದುಃಖಿಸಿದಾಗ ಕಣ್ಣೀರಿಂದ ಜಾರುವ ಮಣಿಗಳನ್ನೂ ಲೆಕ್ಕಮಾಡಿ ಯಾವುದು ಹೆಚ್ಚಾಗಿದ್ದರೆ ಅವರನ್ನು ಆದಿತ್ಯ ಹೆಂಡತಿಯಾಗಿ ಸ್ವೀಕರಿಸಬೇಕು.

ಈ ವಿಚಿತ್ರವಾದ ಷರತ್ತು ಯಾವರೀತಿ




ಮುಕ್ತಾಯವಾಗುವುದೋ ಎಂದು ಎಲ್ಲರೂ ಆತುರದಿಂದ ನೋಡುತ್ತಿದ್ದಾರೆ.

ಆದಿತ್ಯ ಈ ರೀತಿ ಕತೆ ಪ್ರಾರಂಭಿಸಿದ.

'ಒಂದು ಅಡವಿ. ಆ ಅಡವಿಯಲ್ಲಿ ಸುಂದರಳಾದ ಹಳ್ಳಿಯ ಯುವತಿ ಯೊಬ್ಬಳಿದ್ದಳು. ಆಕೆಯ ಕಕ್ಕಿ ಒಬ್ಬ ಬ್ರಹ್ಮರಾಕ್ಷಸಿ. ಆಕಾರಣವಾಗಿ ಆ ಹುಡುಗಿಗೆ ನಾನಾಹಿಂಸೆಗಳನ್ನು ಕೊಡುತ್ತಿದ್ದಳು.' ಕತೆ ಇಲ್ಲಿಯ ವರೆವಿಗೂ ಬರಲು ವಿಮಲ ಪಕ್ಕನೆ ನಕ್ಕಳು. ರತ್ನಗಳು ಉದುರಿದವು. ಲೆಕ್ಕಮಾಡಿದರು. ಆದಿತ್ಯ ತನ್ನಪಾಡಿಗೆ ಕತೆ ಹೇಳಿಕೊಳ್ಳುತ್ತಾ ಹೋದ.

"ಸುಂದರಾಕಾರನೂ, ಬಲಶಾಲಿಯೂ ಆದ ಒಬ್ಬ ರಾಜಕುಮಾರನು ಆ ಹುಡುಗಿಯನ್ನು ಕಂಡು ಮೋಹಿಸಿದ. ಇಬ್ಬರೂ

ಒಂದು ರಾತ್ರಿ ಮನೆಯಿಂದ ಓಡಿಹೋಗಲು ಯೋಚಿಸಿದರು." ಕತೆ ಇಷ್ಟುದೂರ ಬರಲು ಶ್ಯಾಮಲೆ ಭೋರನೆ ಅಳುತ್ತಾ ಕಣ್ಣೀರು ಸುರಿಸಿದಳು. ಮಣಿಗಳು ಉದುರಿದವು. ಅದನ್ನೂ ಲೆಕ್ಕಮಾಡಿದರು.

ಈ ರೀತಿ ನಗುಬರುವ ಸಂಘಟನೆಗಳನ್ನೂ ದುಃಖ ವುಂಟಾಗುವ ಸಂಧರ್ಭಗಳನ್ನೂ ಜೋಡಿಸಿ ಜೋಡಿಸಿ ಆದಿತ್ಯ ಕತೆ ಹೇಳುತ್ತಿದ್ದ.

ಅರ್ಧಗಂಟೆ ಆಯಿತು. ಕತೆ ಇನ್ನೇನು ಮುಗಿಯುವುದರಲ್ಲಿತ್ತು. ಆಗ ಲೆಕ್ಕಮಾಡಿ ನೋಡಲು ಶ್ಯಾಮಲೆ ವಿಮಲೆಗಿಂತಲೂ ಹತ್ತು ಮಣಿಗಳನ್ನು ಹೆಚ್ಚು ಉದುರಿಸಿದ್ದಳು. ಇನ್ನು ಕತೆಯನ್ನು ದುರಂತದಲ್ಲಿ ಮುಕ್ತಾಯ ಮಾಡಿದರೆ, ವಿಮಲೆ ತನ್ನ ನಗುವಿನಿಂದ ಆ ಹತ್ತು ಮಣಿಗಳಿಗಿಂತಲೂ ಹೆಚ್ಚಾಗಿ ಉದುರಿಸ ಬಹುದು.

ಗೆಲುವು ಸಿದ್ಧವೆಂಬ ನಂಬಿಕೆಯಿಂದ ಆದಿತ್ಯ ಮೈಮರೆತ. ಕತೆಯನ್ನು ದುರಂತದಲ್ಲಿ ಮುಗಿಸಬೇಕೆಂಬ ಅಂಶವನ್ನು ಆತ ಮರೆತುಬಿಟ್ಟ. ಮೈಮರೆತು ಉತ್ಸಾಹದಿಂದ ಹೇಳಿಕೊಂಡು ಹೋಗುತ್ತಿದ್ದಾನೆ.

'ಚಿಕ್ಕಮ್ಮ ಹೂಡಿದ ಅನೇಕ ಮಾಯೆಗಳಿಂದ ಪಾರಾಗಿ, ಆ ಹಳ್ಳಿಯ ಹುಡುಗಿಯೂ, ರಾಜಕುಮಾರನೂ ವಿವಾಹವಾಗಿ ಸುಖವಾಗಿ ಕಾಲ ಕಳೆಯುತ್ತಿದ್ದರು' ಎಂದು ಕತೆ ಮುಕ್ತಾಯಮಾಡಿದ.

ಉಕ್ಕಿಬರುವ ದುಃಖದಿಂದ ಶ್ಯಾಮಲೆ ಜೊಳ ಜೊಳನೆಂದು ಕಣ್ಣೀರು ಸುರಿಸಿದಳು. ಆಗಾಗಲೇ ಹತ್ತುಮಣಿ ಹೆಚ್ಚಾಗಿದ್ದ ಮಣಿಗಳಿಗೆ ಜೊತೆಯಾಗಿ ಮತ್ತೊಂದು ಹದಿನೈದು ಮಣಿಗಳು ಸೇರಿದವು.

ಶ್ಯಾಮಲೆಗೂ ಆದಿತ್ಯನಿಗೂ ವಿವಾಹವಾಯಿತು. ಕತೆ ಅಡ್ಡತಿರುಗಿತೆಂಬ ಚಿಂತೆ ಆತನನ್ನು ಬಹಳದಿನ ಕಾಡಲಿಲ್ಲ. ಏಕೆಂದರೆ ಶ್ಯಾಮಲೆಯೂ ಸಹ ರೂಪಸಿ. ದಾಂಪತ್ಯ ಜೀವನದಲ್ಲಿ ಆಗಾಗ ದುಃಖವನ್ನುಂಟು ಮಾಡುವ ಸಂದರ್ಭಗಳೂ ಇರುತ್ತವೆ. ಆ ಸಮಯದಲ್ಲಿ ಆತನಿಗೆ ಬೇಕಾದಷ್ಟು ಮಣಿಗಳು ಸಿಗುತ್ತಿದ್ದುವು.



## ಒಂದೇ ಗೆರೆಯ ಚಿತ್ರ



ಪಿ. ಸರೋಜಿನಿದೇವಿ - ಕಡಪ




## ಬೆಂಕಿಪೆಟ್ಟಿಗೆ ಯಿಂದ ಮತ್ತೊಂದು ಯುಕ್ತಿ

ಮೇಜಿನಮೇಲೆ ಮೂರು ಬೆಂಕಿಪೆಟ್ಟಿಗೆಗಳೂ ಅದರ ಹಿಂದೆ ಮೂರು ಗಾಜಿನ ಗ್ಲಾಸುಗಳೂ ಇವೆ. ಮೊದಲನೇ ಲೋಟಾದಲ್ಲಿ ಕೆಂಪು ರಿಬ್ಬನ್, ಎರಡನೇ ಲೋಟಾದಲ್ಲಿ ನೀಲಿ ರಿಬ್ಬನ್, ಮೂರನೇದರಲ್ಲಿ ಬಿಳಿಯ ರಿಬ್ಬನ್ ಇವೆ.

ಕೆಂಪುರಿಬ್ಬನ್ ಲೋಟಾಗೆ ಎದುರಾಗಿರುವ ಬೆಂಕಿಪೆಟ್ಟಿಗೆಯಮೇಲೆ ಕೆಂಪು ಕಾಗದದ ಚೂರನ್ನು ಅಂಟಿಸಿ, ಪೆಟ್ಟಿಗೆಯಲ್ಲೂ ಕೆಂಪು ರಿಬ್ಬನ್ ಚೂರು ಇಟ್ಟು, ಬೋರಲುಮಾಡಿ ಗ್ಲಾಸು ಹತ್ತಿರ ವಿಡಬೇಕು. ನೀಲಿರಿಬ್ಬನ್ ಇರುವ ಲೋಟಾದ ಎದುರಾಗಿಯೂ, ಬಿಳಿ ರಿಬ್ಬನ್ ಇರುವ ಲೋಟಾದ ಎದುರಾಗಿಯೂ ಬೆಂಕಿಪೆಟ್ಟಿಗೆಗಳನ್ನು ಇಡಬೇಕು. ತರುವಾಯ ಮಂತ್ರಕೋಲನ್ನು ವನ್, ಟೂ, ತ್ರೀ ಎಂದು ಆಪೆಟ್ಟಿಗೆಗಳಿಗೆತಾಕಿಸಿ, ಒಂದೊಂದನ್ನೇ ತೆಗೆದು ತೋರಿಸುವನು. ಆಗಬಿಳಿಯ ಕಾಗದದಚೂರು ಅಂಟಿಸಿದ ಪೆಟ್ಟಿಗೆಯಿಂದ ಕೆಂಪು ರಿಬ್ಬನ್, ಕೆಂಪು ಕಾಗದದಚೂರು ಅಂಟಿಸಿದ ಪೆಟ್ಟಿಗೆಯಿಂದ ನೀಲಿರಿಬ್ಬನ್, ನೀಲಿರಿಬ್ಬನ್ ಕಾಗದದಚೂರು ಅಂಟಿಸಿದ್ದ ಪೆಟ್ಟಿಗೆಯಿಂದ ಬಿಳಿಯರಿಬ್ಬನ್ ಬರುತ್ತಿದೆ. ಪ್ರೇಕ್ಷಕರುನೋಡಿ ಆಶ್ಚರ್ಯಪಡುವರು.




ಒಂದೇ ಟ್ರೇಡ್ ಮಾರ್ಕ್ ಇರುವ ಆರು ಬೆಂಕಿಪೆಟ್ಟಿಗೆಗಳನ್ನು ಸಂಗ್ರಹಿಸು. ಮೂರನ್ನು ತೆಗೆದುಕೊಂಡು, ಮೊದಲನೇ ಪೆಟ್ಟಿಗೆಯ ಮೇಲೆ ಬಿಳಿಯ ಕಾಗದದಗುರುತು, ಎರಡನೇದರ ಮೇಲೆ ಕೆಂಪು ಕಾಗದದ ಗುರುತು,

ಮೂರನೇದರ ಮೇಲೆ ನೀಲಿಕಾಗದದ ಗುರುತನ್ನು ಈ ಮೊದಲೇ ಅಂಟಿಸಿಟ್ಟು ಕೊಳ್ಳಬೇಕು. ಮಿಕ್ಕ ಮೂರು ಬೆಂಕಿ ಪೆಟ್ಟಿಗಳ ಮೇಲಿನ ಲೇಬಲ್ಸ್ ಹರಿಯದಂತೆ ಜಾಗರೂಕತೆಯಿಂದಕಿತ್ತು, ಅದರ ಹಿಂದೆ ನ್ಯೂಸ್‌ಪೇಪರ್ ಚೂರುಗಳನ್ನು ಅಂಟಿಸಿ, ಹೆಚ್ಚು ಕಡಿಮೆಯಿಲ್ಲದಂತೆ ಆ ನ್ಯೂಸ್‌ಪೇಪರನ್ನು ಈ ಲೇಬಲ್ ಸಮಾನವಾಗಿ ನಾಲ್ಕುಕಡೆಯೂ ಕತ್ತರಿಸಬೇಕು. ಈ ಪಕ್ಕದ ಚಿತ್ರದಲ್ಲಿ ತೋರಿಸಿದ '1' ಗುರುತಿರುವ ಲೇಬಲ್ ಈರೀತಿ ತಯಾರು ಮಾಡಿದ್ದು. '2' ಗುರುತಿರುವುದು ಅಚ್ಚ ಬೆಂಕಿಪೆಟ್ಟಿಗೆ. ಅಚ್ಚ ಬೆಂಕಿಪೆಟ್ಟಿಗೆಯಮೇಲೆ ಈ ಬಿಡಿಲೇಬಲ್ ಇಟ್ಟು ತೋರಿಸಿದರೆ ಪ್ರೇಕ್ಷಕರು ವ್ಯತ್ಯಾಸವನ್ನು ತಿಳಿಯಲಾರರು.

ಈಸಾರಿ ಮೊದಲನೇ ನಂಬರ್ ಲೇಬಲ್ ಇರುವ ಬೆಂಕಿಪೆಟ್ಟಿಗೆಮೇಲೆ ಇಡುವ ಬಿಡಿ ಲೇಬಿಲ್‌ಮೇಲೆ ಕೆಂಪುಕಾಗದದ ಗುರುತು ಅಂಟಿಸಬೇಕು. ಎರಡನೇ ನಂಬರ್ ಅಚ್ಚ ಕೆಂಪುಲೇಬಲ್ ಇರುವ ಬೆಂಕಿ ಪೆಟ್ಟಿಗೆಯ ಮೇಲೆ ಇಡುವ ಲೇಬಲ್‌ಮೇಲೆ ನೀಲಿ ಕಾಗದದಗುರುತು ಅಂಟಿಸಬೇಕು. ಅದೇರೀತಿ ಮೂರನೇ ನೀಲಿಗುರುತು ಇರುವಪೆಟ್ಟಿಗೆಯ ಮೇಲೆ ಇಡುವ ಬಿಡಿ ಲೇಬಲ್‌ಮೇಲೆ ಬಿಳಿ ಕಾಗದದ ಗುರುತು ಅಂಟಿಸಬೇಕು.

ಈಗ ಒಂದು, ಎರಡು, ಮೂರು ನಂಬರುಗಳ ಬೆಂಕಿಪೆಟ್ಟಿಗೆಗಳು ಸಾಲಾಗಿ ಕೆಂಪು, ನೀಲಿ, ಬಿಳಿ ಬಣ್ಣದವುಗಳಾಗಿಮೇಲೆ ಕಾಣಿಸುವುದು. ಆದರೆ ಅವುಗಳ ಕೆಳಗಡೆ ಇರುವುದು ಸಾಲಾಗಿ ಬಿಳಿ, ಕೆಂಪು, ಮತ್ತು ನೀಲಿ ಬಣ್ಣದ ಗುರುತುಗಳು! ಈ ರಹಸ್ಯ ಪ್ರೇಕ್ಷಕರುಕಂಡು ಹಿಡಿಯಲಾರರು. ಇನ್ನುಮೇಲೆ ಕಾಣಿಸುತ್ತಿರುವ ಗುರುತಿನಪ್ರಕಾರವೇ ಮೊದಲನೇ ನಂಬರ್ ಬೆಂಕಿಪೆಟ್ಟಿಗೆಯಲ್ಲಿ ಕೆಂಪುರಿಬ್ಬನ್, ಎರಡನೇಯದರಲ್ಲಿ ನೀಲಿ ರಿಬ್ಬನ್, ಮೂರನೇಯದರಲ್ಲಿ ಬಿಳಿರಿಬ್ಬನ್ ಇಟ್ಟು, ಆ ಬೆಂಕಿಪೆಟ್ಟಿಗೆಗಳನ್ನು ಬೋರಲು ಮಾಡಬೇಕು. ಅದರಿಂದ ಬೆಂಕಿಪೆಟ್ಟಿಗೆಯ ಮೇಲೆ ಬಿಡಿಲೇಬಿಲ್, ಮತ್ತೆ ಬೆಂಕಿಪೆಟ್ಟಿಗೆಯನ್ನು ಮೇಲಕ್ಕೆ ತೆಗೆಯುವಾಗ ಆ ಮೇಜಿನ ಮೇಲೇ ಬೀಳುವುದು. ಪ್ರಾರಂಭದಲ್ಲೇ ಆ ಮೇಜಿನಮೇಲೆ ಒಂದು ನ್ಯೂಸ್‌ಪೇಪರ್ ಹರಡಿ ಈ ಯುಕ್ತಿ ಆರಂಭಿಸುವೆವಾದ್ದರಿಂದ ಈ ಬಿಡಿ ಲೇಬಲ್ ಹಿಂದುಗಡೆ ಅಂಟಿಸಿದ ನ್ಯೂಸ್‌ಪೇಪರ್ ಚೂರೂ ಸಹ ನ್ಯೂಸ್ ಪೇಪರ್ ಬಣ್ಣದೊಂದಿಗೆಸೇರಿ ಹೋಗುತ್ತದೆ. ಅಂಟಿಸುವ ಕಾಗದಬಹಳ ನವುರಾಗಿರಬೇಕು.

---

ವಾಚಕರಿಗೆ ಈ ಗಾರುಡಿಯನ್ನು ಕುರಿತು ವಿಶೇಷ ಮಾಹಿತಿಬೇಕಾದರೆ, ಅವರು 'ಚಂದಮಾಮ' ನ ಹೆಸರು ಸೂಚಿಸಿ, ಶ್ರೀ. ಪ್ರೊಫೆಸರರಿಗೆ ಇಂಗ್ಲೀಷಿನಲ್ಲಿ ಬರೆಯಬೇಕು.

ಅವರ ವಿಲಾಸ:

ಪ್ರೊಫೆಸರ್ ಪಿ. ಸಿ. ಸರ್ಕಾರ್, ಮೆಜಿಷಿಯನ್
12/3/A, ಜಮೀರಲೇನ್, ಬಾಲೀಗಂಜ್
ಕಲಕತ್ತಾ-19.

# ಮುಖಚಿತ್ರ

ದಿವ್ಯಮಂಗಳ ಮೂರ್ತಿಯಾದ ಶ್ರೀಕೃಷ್ಣನು ದ್ವಾರಕೆಯಲ್ಲಿರುತ್ತಾ ಒಂದುದಿನ ತನ್ನೊಳಗೆ ತಾನು—"ನಾನು ಈ ಅವತಾರವೆತ್ತಿದುದರ ಪ್ರಯೋಜನವು ಇನ್ನೂ ಪೂರ್ತಿಯಾಗಿಲ್ಲ. ನಾನು ಹುಟ್ಟಿದ ಯಾದವ ಕುಲವನ್ನು ಉಪಸಂಹಾರ ಮಾಡಿಸಿದೆ ನೆಂದರೆ, ಆಗ ನನ್ನ ಕೆಲಸ ಮುಗಿಯುತ್ತೆ" ಎಂದುಕೊಂಡನು.

ಕೃಷ್ಣನು ಹೀಗೆ ಯೋಚಿಸುತ್ತಿರುವಾಗ ವಿಶ್ವಾಮಿತ್ರ, ಅಸಿತ, ಕಣ್ವ, ದೂರ್ವಾಸ, ಭೃಗು, ಅಂಗರಸ್ಸು, ಕಾಶ್ಯಪ, ವಾಮದೇವ, ಅತ್ರಿ, ವಸಿಷ್ಠ, ನಾರದ ಮೊದಲಾದ ಮುನಿಗಳೆಲ್ಲಾ ಅವನ ದರ್ಶನಕ್ಕಾಗಿ ಬಂದರು. ಬಳಿಕ ಕೃಷ್ಣನ ಆಜ್ಞೆ ಯಂತೆ ಪಿಂಡಾರಕ ಕ್ಷೇತ್ರಕ್ಕೆ ಹೋಗಿ ಸೇರಿದರು.

ಅಲ್ಲಿ ಯಾದವ ಕುಮಾರರು ನೀತಿತಪ್ಪಿ ಇಚ್ಛಾನುಸಾರವಾಗಿ ವರ್ತಿಸುತ್ತಿದ್ದರು. ಅವರ ಸ್ವೇಚ್ಛಾಚಾರಕ್ಕೆ ಮಿತಿಮೀರೆ ಇರಲಿಲ್ಲ. ಅಲ್ಲಿಗೆ ಬಂದ ಮಹರ್ಷಿಗಳನ್ನು ನೋಡುತ್ತಲೇ ಒಂದು ಆಟ ಆಡಬೇಕೆಂಬ ಬುದ್ಧಿ ಅವರಿಗೆ ಹುಟ್ಟಿತು. ಒಡನೆಯೇ ಸಾಂಬನೆಂಬ ಹುಡುಗನಿಗೆ ಗರ್ಭಿಣಿ ಹೆಂಗುಸಿನ ವೇಷಹಾಕಿ ಆ ಋಷಿಗಳ ಎದುರು ನಿಲ್ಲಿಸಿದರು. ಬಳಿಕ ವಿನಯದಿಂದ ಪಾದಪ್ರಣಾಮ ಮಾಡಿ ಅವರನ್ನು ಕುರಿತು— "ಮಹಾತ್ಮರೆ, ನೀವು ತ್ರಿಕಾಲಜ್ಞಾನಿಗಳು. ಈ ಸ್ತ್ರೀಗೆ ಎಂತಹ ಮಗು ಹುಟ್ಟುವುದೋ ತಿಳಿಯಬೇಕೆಂದು ಕುತೂಹಲವಾಗಿದೆ. ಅವಳಿಗೆ ಕೇಳಲಿಕ್ಕೆ ನಾಚುಗೆ. ಆದ್ದರಿಂದ ನಾವು ಕೇಳುತ್ತೇವೆ. ದಯಮಾಡಿ ಹೇಳಿ" ಎಂದರು.

ಮುನಿಗಳಿಗೆ ಕೋಪಬಂತು—"ಓಹೊ! ಒಳ್ಳೇಪ್ರಶ್ನೆ ಕೇಳಿದಿರಿ. ಈ ಸ್ತ್ರೀ ಕುಲನಾಶಕಾರಕವಾದ ಒನಕೆಯನ್ನು ಹಡೆಯುತ್ತಾಳೆ. ಆಯಿತೆ? ಇನ್ನು ಹೋಗಿ" ಎಂದರು. ಮತ್ತೆ ಸಾಂಬನಿಗೆ ವೇಷಬಿಚ್ಚಿ ನೋಡಿದಾಗ ಅಲ್ಲಿ ನಿಜವಾಗಿಯೂ ಒಂದು ಒನಕೆ ಹುಟ್ಟಿತ್ತು. ಒಂದೂತೋರಲಿಲ್ಲ ಯದುಕುಮಾರರಿಗೆ. ಭಯದಿಂದ ತತ್ತ ರಿಸಿದರು. ಕಡಗೆ ಗುರುವಿನ ಆಜ್ಞೆಯಂತೆ ಆ ಒನಕೆಯನ್ನು ತೇದಿ ಅರೆದು ಪುಡಿಮಾಡಿ ಅದನ್ನು ಸಮುದ್ರದಲ್ಲಿ ಕಲಸಿದರು. ಎಷ್ಟು ತೇದಿದರೂ ಒಂದು ಚೂರು ಮೊನೆಯಾಗಿ ಹಾಗೇ ಉಳಿದು, ಅದು ಶ್ರೀಕೃಷ್ಣನ ನಿರ್ಯಾಣಕ್ಕೆ ಕಾರಣವಾಯಿತು.

ಅವರು ಸಮುದ್ರದಲ್ಲಿ ಕಲೆಸಿದ ಒನಕೆಯ ಪುಡಿ, ತೆರೆಯೊಂದಿಗೆ ತೀರವನ್ನೆಲ್ಲಾ ವ್ಯಾಪಿಸಿ ಅಲ್ಲೆಲ್ಲಾ ಸೂಜಿಮೊನೆಯ ಮುಳ್ಳಿನಗಿಡವಾಗಿ ಹುಟ್ಟಿತು. ಯಾದವರು ಆ ಮುಳ್ಳುಗಳಿಂದ ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಸತ್ತರು. ಋಷಿಗಳ ಶಾಪವು ಫಲಿಸಿತು.

# ಬಣ್ಣದ ಚಿತ್ರ ಕಥೆ—ಚಿತ್ರ-6

ಚಾಂಗನ ತಾಯಿಯನ್ನು ಕರೆಯಿಸಿ, ಶಾನ್‌ಮಿಂಗಳ ತಂದೆ ಅವಳೊಡನೆ ವಿವಾಹ ವಿಷಯ ಮಾತಾಡಿದನಷ್ಟೆ? ಮಾತಾಡುತ್ತಿದ್ದನೇ ಹೊರತು, ಅಷ್ಟು ಹೊತ್ತೂ ಅವನ ಮನಸ್ಸಿನಲ್ಲಿ ಏನೇನೋ ಅನುಮಾನಗಳು ಕೆರಳಿಕೊಂಡೇ ಇದ್ದುವು.

ಆದರೆ ಅವಳು ಮಾತಾಡಿ ಮುಗಿಸಿದಾಗ, ಶಾನ್‌ಮಿಂಗ್ ತಂದೆಯ ಮನಸ್ಸಿನ ಅನುಮಾನಗಳೆಲ್ಲಾ ತೀರಿಹೋಗಿ ತುಂಬಾ ಉತ್ಸಾಹವುಂಟಾಯಿತು.

ಇಷ್ಟಕ್ಕೂ ಚಾಂಗನ ತಾಯಿ ಹೇಳಿದ ಮಾತಿನ ಪರ್ಯವಸಾನವೇನಂದರೆ : ಚಾಂಗ್ ಎಂಬ ಹುಡುಗ ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲ; ಅದೊಂದು ವಿಚಿತ್ರ ಕಥೆ: ಯಾವನೋ ಒಬ್ಬನಿಗೆ ಒಂದು ಮಗು ಹುಟ್ಟಿತ್ತು. ಹುಟ್ಟಿದ ಮಗುವಿನ ಮುದ್ದಾಟಗಳನ್ನು ನೋಡದೆಯೇ ಅವನು ಈ ಲೋಕವನ್ನುಬಿಟ್ಟು ಹೋಗಿಬಿಟ್ಟ. ಅಲ್ಲಿದ್ದ ದಾಸಿ, ಆ ಮಗುವನ್ನು ಇದ್ದಕ್ಕಿದ್ದಹಾಗೆಯೇ ಎತ್ತಿಕೊಂಡು ಮಾಯವಾಗಿ ಬಿಟ್ಟಳು. ಹಾಗೆ ಎತ್ತಿಕೊಂಡು ಹೋಗಲು ಕಾರಣವಿತ್ತು. ಆ ಮಗುವಿಗೆ ಒಬ್ಬ ಸೋದರಮಾವನಿದ್ದಾನೆ. ಬಹಳ ಕೆಟ್ಟವ; ಬಹಳ ದುರಾಶೆಯವ. ಈ ಕೂಸನ್ನು ಹೇಗಾದರೂ ಮಾಯಮಾಡಿ ಕೊಂದು ಬಿಡಬೇಕೆಂದೂ, ಅದಕ್ಕೆ ಬರುವ ಆಸ್ತಿಗೆಲ್ಲಾ ತಾನೇ ಒಡೆಯನಾಗಬೇಕೆಂದೂ, ತಂತ್ರಮಾಡಿ ಹೊಂಚುಹಾಕಿ ಕುಳಿತಿದ್ದ. ಈ ಅಪಾಯ ವನ್ನು ತಪ್ಪಿಸಲಿಕ್ಕಾಗಿಯೇ ದಾಸಿ ಮಗುವನ್ನು ಎತ್ತಿಕೊಂಡು ಹೋದಳು. ಅನಂತರ ಚಾಂಗನ ಈ ತಾಯಿ ಒಳ್ಳೆಯ ಕನಿಕರದವಳೆಂದು ತಿಳಿದು, ಆ ದಾಸಿ ಆ ಮಗುವನ್ನು ಇವಳ ಕೈಯಲ್ಲಿಟ್ಟು ಹೊರಟು ಹೋದಳು. ಇವಳು ತನಗೆ ಒಪ್ಪಿಸಿದ ಆ ಮಗುವನ್ನು ವರಪ್ರಸಾದ ವೆಂದುಭಾವಿಸಿ, ಭಕ್ತಿಶ್ರದ್ಧೆಗಳಿಂದಬೆಳೆಸಿ ದೊಡ್ಡವನನ್ನಾಗಿ ಮಾಡಿದಳು. "ಹೆತ್ತ ಪ್ರೇಮಕ್ಕಿಂತ ಸಾಕಿದ ಪ್ರೇಮ ಹೆಚ್ಚು" ಎಂಬ ಮಾತನ್ನುಅವಳು ಸಾರ್ಥಕ ಪಡಿಸಿದಳು.

ಆ ಮಗುವೇ ದೊಡ್ಡವನಾದ ಈ ಚಾಂಗ್. ಇನ್ನು ಚಾಂಗನ ತಂದೆ ಯಾರು ಗೊತ್ತೆ? ಶಾನ್‌ಮಿಂಗಳ ತಂದೆಗೆ ಒಂದುಬಿಟ್ಟ ಸೋದರನೇ. ಇನ್ನೇನು? ಸಂಬಂಧಗಳು ತಿಳಿದು ಹೋದಮೇಲೆ ಸಂದೇಹಕ್ಕೆ ಎಡೆಯೇ ಇಲ್ಲ. ಎಲ್ಲಾ ಚೆನ್ನಾಗಿಯೇ ಕೂಡಿತು.

ದೇವಮಾಯೆಗೆ ಎಲ್ಲರೂ ಆಶ್ಚರ್ಯಪಟ್ಟರು. ದೇಶಾಚಾರದಂತೆ ಚಾಂಗನಿಗೂ ಶಾನ್‌ಮಿಂಗಳಿಗೂ ಅತಿ ವೈಭವದಿಂದ ಮದುವೆಜರುಗಿತು. ಅವರು ಸುಖವಾಗಿದ್ದರು. ಶಾನ್‌ಮಿಂಗಳು ತನಗೆ ಇಷ್ಟು ಉಪಕಾರಮಾಡಿದ, ಮಹಿಮೆಯುಳ್ಳ ಆ ಕೊಡೆಯನ್ನು ಮಾತ್ರ ಯಾವಾಗಲೂ ಸ್ಮರಿಸುತ್ತಲೇ ಇದ್ದಳು. —[ಬಣ್ಣದ ಚಿತ್ರ ಕಥೆ ಮುಗಿಯಿತು]

# ಅಜ್ಜಿಯ ಯುಕ್ತಿ

ಶಾಂತಿಪುರದಲ್ಲಿ ರಂಗಮ್ಮ ನೆಂಬ ಬಡವಳಿದ್ದಳು. ಅವಳಿಗೆ ಒಬ್ಬನೇ ಮಗ ರಾಮಯ್ಯ. ಚಿಕ್ಕಂದಿನಲ್ಲಿಯೇ ಗಂಡನು ಮೃತನಾದುದರಿಂದ ಕೂಲಿನಾಲಿ ಮಾಡಿ ಜೀವಿಸುತ್ತಾ ಕಷ್ಟದಿಂದ ಮಗನನ್ನು ವಿದ್ಯಾವಂತನನ್ನಾಗಿ ಮಾಡಿದಳು.

ಹುಡುಗ ಬುದ್ಧಿವಂತನೂ ವಿದ್ಯಾವಂತನೂ ಆದುದರಿಂದ ಎಲ್ಲರ ಮೆಚ್ಚುಗೆಗೆ ಪಾತ್ರನಾಗಿ ತಾಲೂಕು ಕಛೇರಿಯಲ್ಲಿ ಗುಮಾಸ್ತೆಕೆಲಸಕ್ಕೆ ಸೇರಿದನು. ಕಡೆಗೆ ಅಮಲ್ದಾರರ ಮಗಳಾದ ಸುಶೀಲೆಯೊಡನೆ ರಾಮಯ್ಯನ ವಿವಾಹ ನೆರವೇರಿತು. ಸುಶೀಲೆಯು ಅತ್ತೆಮನೆಗೂ ಬಂದಳು.

ಸುಶೀಲೆ ದೊಡ್ಡವರ ಮನೆ ಮಗಳಾದರೂ, ಅವಿದ್ಯಾವಂತೆ, ಹಠವಾದಿ, ಬುದ್ಧಿವಂತಳಲ್ಲ. ಮನೆಯಲ್ಲಿ ತಾನು ಸ್ವತಂತ್ರಳಾಗಿರಬೇಕೆಂದು ಬಯಸಿ, ಒಂದುದಿನ ಅತ್ತೆಯೊಂದಿಗೆ ಜಗಳವಾಡಿ "ಇದು ನನ್ನಮನೆ, ನನ್ನ ಸಂಸಾರ, ನಾನು ನೋಡಿಕೊಳ್ಳುತ್ತೇನೆ, ನೀವು ಹೊರಟುಹೋಗಿ" ಎಂದಳು.

ರಂಗಮ್ಮ ಎಷ್ಟಾದರೂ ಕಷ್ಟಪಟ್ಟವಳು, ಸೈರಣೆಯುಳ್ಳವಳು, ಜಾಣೆ. ಆಕೆ ಏನೂ ಉತ್ತರಿಸಲಿಲ್ಲ. ಸಾಯಂಕಾಲ ಮಗನೊಂದಿಗೆ ನಡೆದ ವಿಷಯ ತಿಳಿಸಿದಳು. ರಾಮಯ್ಯ ನಿರುಪಾಯನಾಗಿ "ಅಮ್ಮಾ, ಅವಳು ಮೇಲಿನ ಅಧಿಕಾರಿಯ ಮಗಳು; ಅವಳಿಗೆ ಸಿಟ್ಟಾದರೆ ನಮಗೇನಾದರೂ ತೊಂದರೆಯುಂಟಾದೀತು. ಆದುದರಿಂದ ನಾವು ತಗ್ಗಿ ನಡೆಯಬೇಕು" ಎಂದು ನಿಟ್ಟುಸಿರುಬಿಟ್ಟನು.

ರಂಗಮ್ಮ ರಾತ್ರಿಯೆಲ್ಲಾ ಯೋಚಿಸಿ ಒಂದು ಉಪಾಯ ಹೂಡಿದಳು. ಬೆಳಗ್ಗೆ ಸುಶೀಲೆಯೊಡನೆ "ಅಮ್ಮಾ, ನೀನುಹೇಳುವುದು ನಿಜ, ಆದರೆನೋಡು, ನನಗೊಬ್ಬನೇ ಮಗ. ಅವನಿಗೆ ಹುಟ್ಟುವ ಮೊಮ್ಮಗನನ್ನು ಕಣ್ಣಾರೆಕಂಡು ಸಂತೋಷಪಡಬೇಕೆಂದು ನನಗೆ ಆಸೆ. ನಂತರ ನಾನೇ ಹೋಗುತ್ತೇನೆ. ನಿನಗ್ಯಾಕೆ ತೊಂದರೆ" ಎಂದು ಹೇಳಿದಳು. ಸುಶೀಲೆ ಸುಮ್ಮನಾದಳು.

ಸುಶೀಲೆಗೆ ರಮೇಶನೆಂಬ ಒಬ್ಬ ಮಗ ಹುಟ್ಟಿದ. ಸುಶೀಲೆಯು ಅತ್ತೆಯುಕೊಟ್ಟ ಮಾತನ್ನು ಮರೆತಿರಲಿಲ್ಲ. ಪುನ ಅತ್ತೆಯನ್ನು ಪೀಡಿಸಲಾರಂಭಿಸಿದಳು. ಆದರೆ ಜಾಣೆಯಾದ ರಂಗಮ್ಮ ಮೊಮ್ಮಗನ ಹುಟ್ಟಿದಹಬ್ಬ, ಚೌಲ, ಉಪನಯನ, ಇವುಗಳನ್ನು ನೋಡಿಕೊಂಡು ಹೋಗುತ್ತೇನೆಂದು ನೆಪಗಳನ್ನು ಹೇಳುವುದೂ, ತತ್ಕಾಲಕ್ಕೆ ಸುಶೀಲೆಯು ಒಪ್ಪಿಕೊಳ್ಳುವುದೂ, ಹೀಗಾಗಿ ಅನೇಕ ವರ್ಷಗಳುಕಳೆದುವು.

ರಮೇಶನಿಗೆ, ಸರ್ಕಾರದಲ್ಲಿ ಒಂದು ದೊಡ್ಡ ಹುದ್ದೆ ದೊರಕಿತು. ಶ್ಯಾನುಭೋಗರ ಮಗಳಾದ ರಮಾದೇವಿಯೊಡನೆ ರಮೇಶನ ವಿವಾಹನಡೆಯಿತು. ರಮಾ, ಬಡವರ ಮನೆಯವಳಾದರೂ ಬಹಳ ಜಾಣೆ ಸುಶಿಕ್ಷಿತೆ, ಮತ್ತು ವಿಧೇಯಳು. ಸುಶೀಲೆಯು ಅತ್ತೆಯನ್ನು ಹೊರಡಿಸಲು ಯತ್ನಿಸುವುದನ್ನು ನೋಡಿ ರಮೆಗೆ ಸಂಕಟವಾಯಿತು. ಮಾರನೇ ದಿನ ರಮಾ ಒಂದು ಸಂಚು ಹೂಡಿದಳು.

ರಮಾ ಸುಶೀಲೆಯನ್ನು ಕುರಿತು, "ಅತ್ತೆಮ್ಮನವರೇ, ನೀವು ಮನೆಬಿಟ್ಟು ಹೊರಡುವಿರಿ ತಾನೆ? ಇನ್ನುಮೇಲೆ ಈ ಮನೆಗೆ ಯಜಮಾನಿ ನಾನಲ್ಲವೆ?" ಎಂದಳು.

ಸುಶೀಲೆಗೆ ಕೋಪವು ಉಕ್ಕೇರಿತು. "ಯಾರೇ ಅದು? ನನ್ನ ಮನೆಬಿಟ್ಟು ಹೊರಡಿಸುವವಳು? ಎಷ್ಟು ಜೋರುನಿನ್ನದು?" ಎಂದು ಹಾರಾಡಿದಳು.

ರಮಾ, ಫಕಫಕನೆ ನಕ್ಕು "ಕೋಪಿಸಬೇಡಿ ಅತ್ತೆ, ನೀವು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ನಾನು ಅನುಸರಿಸಿದರೆ, ಅದರಲ್ಲಿ ತಪ್ಪೇನು?" ಎಂದಳು.

ಮೂಢಳಾದ ಸುಶೀಲೆಗೆ ಏನೂ ಅರ್ಥವಾಗಲಿಲ್ಲ. ಆದರೂ ದರ್ಪದಿಂದ "ಏನೇ ಅದು ಮೇಲಂಕ್ತಿ? ಸರಿಯಾಗಿ ಹೇಳು" ಎಂದು ನುಡಿದಳು. ರಮಾ ಮುಗುಳು ನಗೆ ನಗುತ್ತಾ "ಅತ್ತೆಮ್ಮನವರೇ, ನೀವು ಸೊಸೆಯಾಗಿ ಮನೆಗೆಬಂದಿರಿ, ನಿಮ್ಮ ಅತ್ತೆಯವರನ್ನು ಹೊರಗೆಹಾಕಲು ಯತ್ನಿಸಿದಿರಿ. ಈಗ ನಾನು ನಿಮ್ಮ ಸೊಸೆ, ಅತ್ತೆಯಾದ ನಿಮ್ಮನ್ನು ಓಡಿಸಲು ಯತ್ನಿಸಿದೆ ಸರಿಯಲ್ಲವೇ, ನೀವೇ ಹೇಳಿ" ಎಂದು ಸುಮ್ಮನಾದಳು.

ಸುಶೀಲೆಗೆ ಆಗ ನಾಚಿಕೆಯೂ, ಪಶ್ಚಾತ್ತಾಪವೂ ಏಕಕಾಲದಲ್ಲಿ ಉಂಟಾದುವು. ಅವಳು ದುಃಖದಿಂದ ರಂಗಮ್ಮನಲ್ಲಿ ಕ್ಷಮೆ ಬೇಡಿದಳು.

ಇದನ್ನು ನೋಡಿ ರಾಮಯ್ಯ ಮತ್ತು ರಮೇಶರಿಗೆ ಆನಂದ ಉಂಟಾಯಿತು. ರಾಮಯ್ಯನು ತಾಯಿಯ ಜಾಣ್ಮೆಗೂ ಸೊಸೆಯ ವಿಧೇಯತೆಗೂ ಮೆಚ್ಚಿದನು. ಅಂದಿನಿಂದ ಅವರ ಮನೆಯಲ್ಲಿ ಸುಖಶಾಂತಿಗಳು ತುಂಬಿ ತುಳುಕಾಡತ್ತಿದ್ದುವು.

—ಬಿ. ವಿ. ಚಂಪಕಮಾಲಾ.

## ನ ಗೆ ಹ ನಿ

ಗುರು—'ವಂದೇಮಾತರಂ' ಇದರರ್ಥವೇನು?
ರಾಮು—ಒಬ್ಬನೇ ಗುರು—ಎಂದು ಸಾರ್.
ಗುರು—ಅದು ಹೇಗೋ?
ರಾಮು—ನನ್ನ ತಮ್ಮ ಮನೆಗೆ ಒಬ್ಬರು ಮೇಷ್ಟರು ಬಂದಾಗಲೆಲ್ಲಾ 'ಒಂದೇಮಾತರ' ಬಂತು ಎಂತಾನೇ ಸಾರ್.

*　　*　　*

ಚಂದ್ರ—ಲೋ, ಕಿಟ್ಟಿ, ಚಂದ್ರ ನಿನಗೆಷ್ಟು ದೂರದಲ್ಲಿದ್ದಾನೋ?
ಕಿಟ್ಟಿ—ನನಗೆ ಆರೇ ಅಂಗುಲ ದೂರದಲ್ಲಿದ್ದಾನೆ.

—ಸರಸ್ವತಿ, ಎಸ್. ಎಂ. ಭಟ್.

*　　*　　*

ಆತ—ಏನಮ್ಮ, ನಿಮ್ಮ ಗಂಡ ಆರೋಗ್ಯವೇ?
ಆಕೆ—ಏನ್ರೀ, ಏಕವಚನದಲ್ಲಿ ನಮ್ಮವರನ್ನ ಗಂಡ-ಗಿಂಡ ಅಂತ ಅಂತೀರ?
ಆತ—ಅಯ್ಯೋ, ತಪ್ಪಾಯಿತಮ್ಮ, ನಿಮ್ಮ ಗಂಡಂದಿರು ಆರೋಗ್ಯವೇ?
ಆಕೆ—ಏನು, ನಿನ್ನ ಬುದ್ಧಿ ನೆಟ್ಟಗಿದೆಯೋ ಇಲ್ಲವೊ? ನನಗೆ ಎಷ್ಟು ಜನ ಗಂಡಂದಿರೆಂತ ಹಾಸ್ಯಮಾಡುವಿಯಾ? ಜೋಕೆ!
ಆತ—(ಮಾತಾಡದೆ ಪರಾರಿ).

*　　*　　*

ಗಿರಾಕಿ—(ಹೋಟಲಿನಲ್ಲಿ) ಏನಯ್ಯ, ಕಾಫಿ ಹೀಗಿದೆ? ಎಲ್ಲಿ ನಿಮ್ಮ ಸಾಹುಕಾರ್ರು?
ಮಾಣಿ—ಅವರು ಆಗಲೇ ಈ ಕಾಫಿ ಕುಡೀಲಾರದೆ ಬೇರೆ ಹೋಟಲಿಗೆ ಹೋಗಿದ್ದಾರೆ.

—ಬಿ. ಪಿ. ನರಸಿಂಹಮೂರ್ತಿ.

ವಿಜಯ ರವರ

# ಮದುವೆಮಾಡಿನೋಡು

(ತೆಲುಗು)

40 ಕೇಂದ್ರಗಳಲ್ಲಿ ವಿಜಯಭೇರಿ ಮೊಳಗಿಸುತ್ತಿದೆ

ನಿರ್ಮಾಪಕರು :

ನಾಗಿರೆಡ್ಡಿ & ಚಕ್ರಪಾಣಿ

ಡೈರೆಕ್ಷನ್ :

ಪ್ರಸಾದ್



Printed by B. NAGIREDDI at the B. N. K. Press Ltd., Madras 24 and Published by him from Chandamama Publications, Madras 24. Controlling Editor : SRI CHAKRAPANI

